ಶ್ರೀಃ.

ಶ್ರೀಮತೇ ನಮಃ.

# ಸ್ತುತಿಮಂಜರೀ



ಅಖಿಲನಿಗಮಗಮ್ಯೋ ಮಗ್ನಪಾಥೋಧಿಶಾಯೀ
ವಿಧೃತವಿಭವರೂಪಸ್ಸರ್ವಭೂತಾನ್ತರಾತ್ಮಾ ।
ಸಕಲಮನುಜಪೂಜ್ಯಪ್ರಾಕೃತಾಂಗಪ್ರಕಾಂಡ
ಸ್ಸದಿಶತು ಭಗವಾನ್ನಶ್ಶೇಮುಷೀಂ ಭಕ್ತಿರೂಪಾಮ್ ॥ ॥ ೧ ॥

ಅಶೇಷವೇದವೇದ್ಯವಾದ ಪರಸ್ವರೂಪವೆಂದೂ, ಕ್ಷೀರಾಬ್ಧಿಯಲ್ಲಿ ಮಹಾಶೇಷಶಾಯಿಯಾದ ವ್ಯೂಹರೂಪವೆಂದೂ, ಮತ್ಸ್ಯಕೂರ್ಮಾದಿಗಳಾದ ವಿಭವ ರೂಪವೆಂದೂ, ಸಕಲ ಪ್ರಾಣಿಗಳ ಹೃದಯಗುಹಾಂತರ್ಗತವಾದ ಅಂತರ್ಯಾಮಿ ರೂಪವೆಂದೂ, ಸಕಲ ಭಕ್ತರೂ ಅರ್ಚಿಸಲು ಸುಲಭವಾದ ಅಪ್ರಾಕೃತವಾದ ವಿಗ್ರಹವೆಂದೂ ಪಂಚಾತ್ಮಕನಾದ ಶ್ರೀ ಪರಮಾತ್ಮನು ಭಕ್ತರಾದ ನಮಗೆ ಭಕ್ತಿರೂಪವಾದ ಜ್ಞಾನವನ್ನು ಅನುಗ್ರಹಿಸಲಿ (ಎಂದು ಪ್ರಾರ್ಥನೆ) ॥೧॥

ಆತ್ಮಾರಾಮೈರ್ಮುನಿಭಿರನಿಶಂ ಧ್ಯಾಯತೇ ಹೃದ್ಗುಹಾಯಾಂ
ಮುದ್ರಾ ಶೌರೇಃ ಫಣಿಪತಿತನೌ ಕುಂಡಲಿನ್ಯಾಖ್ಯಯಾ ಯಾ।
ವ್ಯಕ್ತೀಕುರ್ವನ್ ಸಕಲಜಗತಾಂ ತಾಂ ಕೃಪಾಪೂರ್ಣಚಿತ್ತಃ
ಶ್ರೀರಂಗೇಶೋ ವಿತರತುತರಾಂ ಶಾಶ್ವತಂ ಮಂಗಲಂ ನಃ ॥ ॥ ೨ ॥

ಶ್ರೀ ಶೇಷನಲ್ಲಿ ಕುಂಡಲಿನೀ ಎಂಬ ಹೆಸರಿನಿಂದ ಪ್ರಸಿದ್ಧವಾದ ಭಗವಂತನ ಯಾವ ಮುದ್ರೆಯು ಆತ್ಮಕ್ರೀಡೆಯುಳ್ಳ ಋಷಿಗಳಿಂದ ಹೃ

ದಯುಗುಹೆಯಲ್ಲಿ ಧ್ಯಾನಿಸಲ್ಪಡುತ್ತಿದೆಯೋ, ಅದನ್ನು ಎಲ್ಲರಿಗೂ ಪ್ರಕಟವಾಗಿ ತೋರಿಸಿಕೊಡುತ್ತಿರುವ, ಕೃಪೆಯಿಂದ ತುಂಬಿದಮನಸ್ಸುಳ್ಳ ಶ್ರೀರಂಗನಾಥಸ್ವಾಮಿಯು ನಮ್ಮಗಳಿಗೆಲ್ಲ ಶಾಶ್ವತವಾದ ಮಂಗಳವನ್ನುಂಟುಮಾಡಲಿ. ॥೨॥

ಸರ್ವೈರ್ವೇದಗಣೈಸ್ಸದೈವವಿನುತಂ ಸರ್ವಾಘದಾಹಕ್ಷಮಂ
ರೂಪಂ ದಿವ್ಯಮನಂತಮಂಗಲಗುಣಾವಾಸಂ ನಿವಾಸಂ ಶ್ರಿಯಃ।
ಯೋಧತ್ತೇ ಕಲಿಪಂಕಮಗ್ನಜಗತೀಶೇಷೇಽತ್ರ ಶೇಷಾಚಲೇ
ಕುರ್ಯಾಚ್ಛಾಶ್ವತಮಂಗಲಾನಿಭುವಿ ನಃ ಶ್ರೀಶ್ರೀನಿವಾಸೋಽನಿಶಮ್ ॥೩॥

ಎಲ್ಲ ವೇದಗಳಿಂದಲೂ ಸ್ತೋತ್ರಮಾಡಲ್ಪಟ್ಟದ್ದಾಗಿಯೂ, ಸರ್ವಪಾಪಗಳನ್ನೂ ಸುಡುವ ಮಹಾ ಶಕ್ತಿಯುಳ್ಳದ್ದಾಗಿಯೂ, ಅಪರಿಮಿತವಾದ ಮಂಗಳಗುಣಗಳಿಗೆಲ್ಲ ಆವಾಸಸ್ಥಾನವಾಗಿಯೂ, ಲಕ್ಷ್ಮೀನಿವಾಸಸ್ಥಾನವಾಗಿಯೂ ಇರುವ ದಿವ್ಯರೂಪವನ್ನು (ಎಲ್ಲ ಭಕ್ತಜನರ ಅನುಗ್ರಹಾರ್ಥವಾಗಿ ಎಲ್ಲರಿಗೂ ಕಾಣುವಂತೆ) ಕಲಿ ಎಂಬ ಕೆಸರಿನಲ್ಲಿ ಮುಳುಗಿಹೋದ ಲೋಕದಲ್ಲೆಲ್ಲ ಉಳಿದಿರುವುದರಿಂದ ಶೇಷ–ಎಂಬ ಹೆಸರನ್ನುಹೊಂದಿರುವ ಶೇಷಾಚಲದಲ್ಲಿ ಪ್ರಕಾಶಪಡಿಸುವ ಶ್ರೀನಿವಾಸದೇವರು ಭೂಮಿಯಲ್ಲಿ ಎಲ್ಲರಿಗೂ ಯಾವಾಗಲೂ ಶಾಶ್ವತವಾದ ಮಂಗಲಗಳನ್ನುಂಟುಮಾಡಲಿ. ॥೩॥

ದುರ್ವಾರಾಂತಪಾಪಕರಿಣಾಂ ಮಥನಾಯ ತುಂಗೇ
ಹಸ್ತ್ಯಾಹ್ವಯೇ ವರಗಿರೌ ವಿಹಿತಾವತಾರಃ ।
ಸಿಂಹಾಕೃತಿರ್ದ್ವಿಷಾಂ ನತದೃಶಾಂ ಸುರಭಿಸ್ತು ಭೂಮಿಃ
ಹಸ್ತೀಶ್ವರೋ ವಿತನುತಾಂ ಸಕಲೇಪ್ಸಿತಾನಿ ॥ ॥ ೪ ॥

ತಡೆಯಲಸಾಧ್ಯವಾದ ಪಾಪಗಳೆಂಬ ಆನೆಗಳನ್ನು ನಾಶಮಾಡಲು, ಎತ್ತರವಾದ ಹಸ್ತಿಶೈಲವೆಂಬ ಪರ್ವತಶ್ರೇಷ್ಠದಲ್ಲಿ ಅವತಾರಮಾಡಿ ಶತ್ರುಗಳಿಗೆ ಮಾತ್ರ ಸಿಂಹದ ಆಕಾರವುಳ್ಳವನಾದರೂ, ಆಶ್ರಿತರ ಕಣ್ಣಿಗೆ ಭೂಮಿಯ ಕಾಮಧೇನುವಿನಂತೆ ಇರುವ ಶ್ರೀ ಹಸ್ತಿಶೈಲಾಧಿಪತಿಯಾದ

ಶ್ರೀ ವರದರಾಜಸ್ವಾಮಿಯು ಎಲ್ಲರ ಅಪೇಕ್ಷೆಗಳನ್ನೂ ವಿಶೇಷವಾಗಿ ಕೊಡುವವನಾಗಲಿ. ॥೪॥

ಸಂರಕ್ಷಣೀಯಜನದರ್ಶನಕೌತುಕೇನ
ಯೋ ಯಾದವಾದ್ರಿಮಧಿರುಹ್ಯ ಚಕಾಸ್ತಿ ದೇವಃ ।
ಸಂದರ್ಶನಾಗತಜನಪ್ರಕಟಪ್ರಭಾವಃ
ಸೋಽಯಂ ತನೋತು ಭುವಿ ಸನ್ತತಮಂಗಲಾನಿ ॥ ॥ ೫ ॥

(ತನ್ನಿಂದ) ರಕ್ಷಿಸಲ್ಪಡಬೇಕಾದ ಜನಗಳನ್ನು ನೋಡಲು ಆಶೆಯಿಂದ ಯಾವದೇವನು ಯಾದವಗಿರಿ ಎಂಬ ದಿವ್ಯಕ್ಷೇತ್ರವನ್ನು ಹತ್ತಿ ಪ್ರಕಾಶಿಸುವನೋ, (ತನ್ನ) ದರ್ಶನಾರ್ಥವಾಗಿ ಬಂದ ಜನಗಳ (ಇಷ್ಟಸಿದ್ಧಿಯಿಂದ) ಪ್ರಸಿದ್ಧವಾದ ಮಾಹಾತ್ಮ್ಯವುಳ್ಳ, ಆ ಶ್ರೀಮನ್ನಾರಾಯಣಸ್ವಾಮಿಯು ಭೂಮಿಯಲ್ಲಿ (ಎಲ್ಲರಿಗೂ)ಯಾವಾಗಲೂ ಮಂಗಳಗಳನ್ನು ವಿಸ್ತರಿಸಲಿ॥೫॥

ಧೃತ್ವಾ ರಶ್ಮೀನ್ ಸವ್ಯಹಸ್ತೇ ಕಶಾಂಚಾ-
ನ್ಯಸ್ಮಿನ್ಪಾದೌ ಕೂಬರಾಧಃ ಪ್ರಸಾರ್ಯ ।
ಸೇನಾಮಧ್ಯೇ ಧೂಳಿಧೂಮ್ರಾಲಕಾಲಿಃ
ಗೀತಾಂವರ್ಷನ್ಪಾರ್ಥಸೂತೋಽಸ್ತು ಮೇಽಗ್ರೇ ॥ ॥ ೬ ॥

ಎಡಗೈಯಲ್ಲಿ ಕುದುರೆಯ ಲಗಾಮನ್ನೂ, ಬಲಗೈಯಲ್ಲಿ ಬಾರುಗೋಲನ್ನೂ ಹಿಡಿದುಕೊಂಡು, ಕಾಲುಗಳನ್ನು ನೊಗದಿಂದ ಕೆಳಗೆ ನೀಡಿಕೊಂಡು, ಎರಡು ಸೈನ್ಯಗಳಮಧ್ಯದಲ್ಲಿ ಧೂಳಿನಿಂದ ಮಲಿನವಾದ ಮುಂಗುರುಳುಗಳುಳ್ಳ ಶ್ರೀ ಪಾರ್ಥಸಾರಥಿಯು ನನ್ನಮುಂದೆಯೂ ಬಂದು ನಿಲ್ಲುವವನಾಗಲಿ. ॥೬॥

ಸ್ತೋತ್ರಪ್ರಿಯಸ್ಯ ಭವತಸ್ಸ್ತವನೈರಿಹಾರ್ಚಾಂ
ಭೀಷ್ಮಸ್ಸದಾಽಧಿಕತಮಂ ಮನುತೇ ಹಿ ಧರ್ಮಮ್ ।
ತ್ವಂಯಾದೃಶೀಂ ಮಮ ವಿತೇರಿಥ ಶಕ್ತಿಮತ್ರ
ಸರ್ವೇಶ್ವರೈತದನುರೂಪಮಿಮಂ ತನೋಮಿ॥ ॥ ೭ ॥

ಸ್ತೋತ್ರಮಾಡಿಸಿ ಕೊಳ್ಳುವುದರಲ್ಲಿ ಪ್ರೀತಿಯುಳ್ಳ ನಿನ್ನನ್ನು ಸ್ತೋತ್ರಗಳಿಂದ ಯಾವಾಗಲೂ ಅರ್ಚಿಸುವುದನ್ನು ಅತ್ಯಧಿಕವಾದ ಧರ್ಮವನ್ನಾಗಿ ಭೀಷ್ಮಾಚಾರ್ಯರು ಅಭಿಪ್ರಾಯ ಪಟ್ಟಿರುತ್ತಾರೆ. ಎಲೈ ಸರ್ವೇಶ್ವರನೇ ! ನೀನು ಈ ವಿಷಯದಲ್ಲಿ ನನಗೆ ಎಷ್ಟು ಶಕ್ತಿಯನ್ನು ಕೊಟ್ಟಿರುತ್ತೀಯೋ, ಅದಕ್ಕೆ ತಕ್ಕಂತೆ ನಾನೂ ಇದನ್ನು ಮಾಡುವೆನು. ॥೩॥

ವೇದಾಂಸ್ತವಾಂತರಹಿತಾನ್ಪ್ರಹಿಣೋಽಪಿ ನುತ್ಯೈ
ತೇಽನನ್ತನಾನ್ತಮುಪಯಾನ್ತಿ ನುತೇಸ್ತವೈವ ।
ಆನನ್ತ್ಯಮೇವಯುವಯೋರ್ಮಿತಿಮೇಯಯೋಶ್ಚೇತ್
ಕಿಂನಾಸ್ತ್ಯಶಕ್ತಿವಿಷಯೇ ಮಮ ತತ್ಪ್ರಮಾತುಃ ॥ ॥೪॥

ಎಲೈ ಅಂತರರಹಿತನಾದವನೆ ! ನೀನು ಅನಂತಗಳಾದ ವೇದಗಳನ್ನು ನಿನ್ನನ್ನು ಸ್ತೋತ್ರಮಾಡಲು ಕಳುಹಿಸಿದೆ. ಅವುಗಳೂ ನಿನ್ನ ಸ್ತೋತ್ರಮಾಡಿ ಕೊನೆಗಾಣುವುದಿಲ್ಲವು. ಹೀಗೆ ಪ್ರಮಾಣ ಪ್ರಮೇಯರಾದ ನಿಮ್ಮಗಳಿಗೇನೇ ಅನಂತತ್ವವು ಇರಲಾಗಿ ಪ್ರಮಾತೃವಾದ ನನಗೆ ಸ್ತುತಿಮಾಡಲು ಅಶಕ್ತಿ ವಿಷಯದಲ್ಲಿ ಅನಂತತ್ವವು ಏತಕ್ಕೆ ಇರಬಾರದು? ॥೪॥

ಇಷ್ಟಾಪೂರ್ತಂ ಜಾಯಮಾನಂ ಚ ಜಾತಂ
ನಾಭಿರ್ಲೋಕಸ್ಯಾಖಿಲಂ ಯೋ ಬಿಭರ್ಷಿ ।
ಸ ತ್ವಂ ಕುರ್ಯಾಃ ಕರ್ಣಯೋಸ್ತೇ ಪ್ರಹರ್ಷಾತ್
ಪುಷ್ಪಾಣಾಂ ಮೇ ಮಂಜರೀಂ ಶಬ್ದರೂಪಾಮ್ ॥ ೫ ॥

ಲೋಕಕ್ಕೆಲ್ಲ ನಾಭಿಸ್ಥಾನನಾಗಿದ್ದು ಈಗ ನಡೆಯುತ್ತಲೂ ಹಿಂದೆ ನಡೆದೂ ಇರುವ ಸಕಲ ವಿಧವಾದ ಧರ್ಮಗಳನ್ನೂ ಯಾವ ನೀನು ಧರಿಸುತ್ತೀಯೊ, ಅಂತಹ ನೀನು ನನ್ನ ಶಬ್ದರೂಪವಾದ ಪುಷ್ಪಮಂಜರಿಯನ್ನೂ ಸಂತೋಷದಿಂದ ನಿನ್ನ ಕಿವಿಗಳಲ್ಲಿ ಧರಿಸುವವನಾಗಬೇಕು. ॥೫॥

ಶಾಸ್ತ್ರೇಷು ಕಿಂಚಿದಿಹ ವೇದ್ಮಿ ಗುರೋಃ ಪ್ರಸಾದಾತ್
ಜಾನಾಮಿ ಮರ್ತ್ಯನಿವಹಸ್ಯ ವಿನಶ್ವರತ್ವಮ್ ।

ಪ್ರತ್ಯೇಮಿ ಮಂಗಳಗುಣಾನ್ವಿಪುಲಾನನನ್ತೇ
ಹಾಽದ್ಯಾಪಿ ಮೇ ಕಿಲ ರತಿಃ ಕಲುಷೇಭವೇಽಸ್ಮಿನ್ ॥ ೧೮॥

ಗುರುಗಳ ಅನುಗ್ರಹದಿಂದ ಶಾಸ್ತ್ರಗಳಲ್ಲಿ ಸ್ವಲ್ಪವನ್ನೇ ತಿಳಿದಿದ್ದೇನೆ. ಮನುಷ್ಯ ಸಮೂಹದ ಅಸ್ಥಿರತ್ವವನ್ನು ಬಲ್ಲೆನು. ಪರಮಾತ್ಮನಲ್ಲಿ ಅಪರಿಮಿತಗಳಾದ ಮಂಗಳಗುಣಗಳುಂಟೆಂದು ದೃಢವಾಗಿಯೂ ನಂಬಿದ್ದೇನೆ. ಆದರೂ ನನಗೆ ಈ ಕಶ್ಮಲವಾದ ಸಂಸಾರದಲ್ಲಿ ಈಗಲೂ ಪ್ರೀತಿ ಇದೆಯಲ್ಲ ! ಅಯ್ಯೋ ! ॥೧೦॥

ಕಿಂ ಮಾಂ ಸಸರ್ಜಿಥ ವಿಭೋ ! ಕರುಣಾಮೃತಾಬ್ಧೇ !
ಕಾ ತೇ ಸ್ಪೃಹಾ ಸಕಲಮಂಗಲಭಾಜನಸ್ಯ ।
ಕಿಂ ವಾ ಮಯಾಪಿಚ ನಿರರ್ಥಕಜಂತುನಾ ತೇ
ಕಾರ್ಯಂಜಗನ್ತಿ ಸೃಜತೋ ನನುಸರ್ವಶಕ್ತೇಃ ॥ ೧೧॥

ಎಲೈ ಪ್ರಭುವೇ! ಎಲೈ ಕೃಪಾಸಮುದ್ರನೇ! ನನ್ನನ್ನು ಏತಕ್ಕೆ ಸೃಷ್ಟಿಸಿದೆ ? ಎಲ್ಲ ಮಂಗಳಗಳಿಗೂ ಪಾತ್ರನಾದ ನಿನಗೆ ಯಾವ ಆಶೆಯುಂಟು ? ಸರ್ವಶಕ್ತನಾಗಿ ಲೋಕಗಳನ್ನೆಲ್ಲ ಸೃಷ್ಟಿಸುವ ನಿನಗೆ ನಿರರ್ಥಕ ಜಂತುವಾದ ನನ್ನಿಂದ ಮಾಡಲ್ಪಡಬೇಕಾದ ಕಾರ್ಯವೇನುಂಟು?॥೧೧॥

ತ್ವಾಮಾಮನನ್ತಿ ಬಹುಶಃ ಕವಯಃ ಪುರಾಣಾಃ
ಶೌರೇ! ಕೃಪಾಜಲನಿಧಿಂವಿಪದೇಕಬನ್ಧುಮ್ ।
ಕಿಂ ತ್ವಂ ತಥಾಪ್ಯುತ ತದುಕ್ತಿಗಣೋಽಪಿ ಮಿಥ್ಯಾ
ಬ್ರೂಹ್ಯೇತಯೋಃ ಕತರದತ್ರ ಭವೇತ್ಪ್ರಮಾಣಮ್ ೧೨॥

ಶೂರನಾದವಸುದೇವನ ಪುತ್ರನಾಗಿರುವ ಎಲೈ ಪರಮಾತ್ಮನೇ ! ಪೂರ್ವಿಕರಾದ ಕವಿಗಳು ನಿನ್ನನ್ನು ಕೃಪಾಸಮುದ್ರನೆಂದೂ, ಕಷ್ಟಕಾಲದಲ್ಲಿ ಮುಖ್ಯಬಂಧುವೆಂದೂ ಅನೇಕಥಾ ಹೇಳುತ್ತಾರೆ. ನೀನು ಹಾಗೆಯೇ ಇರುವೆಯಾ ? ಅಥವಾ ಅವರುಗಳ ಮಾತುಗಳೆಲ್ಲಾ ಅಸತ್ಯವೇ? ಇವೆರಡರಲ್ಲಿಯಾವುದು ಪ್ರಮಾಣ? ಹೇಳು. ॥೧೨॥

ದುಃಖೈಃ ಪ್ರಕಾಮಕಠಿನೈಃ ಪರಿಪೀಡ್ಯಮಾನಃ
ಪೃಚ್ಛಾಮಿ ಸಂಪ್ರತಿ ಭವನ್ತಮಿಹೈಕಮರ್ಥಮ್ ।
ಶಾಸ್ತ್ರೇಽಖಿಲೇ ಸುವಿದಿತಾ ತವ ಸರ್ವಶಕ್ತಿಃ
ಕಿಂ ದುಃಖನಾಶನವಿಧಾವುತ ತತ್ಪ್ರದಾನೇ ॥ ೧೩॥

ಎಲೈ ಪರಮಾತ್ಮನೇ! ಬಹಳಕಠಿನಗಳಾದ ದುಃಖಗಳಿಂದ ಸುತ್ತಲೂ ಪೀಡಿಸಲ್ಪಡುತ್ತಿರುವ ನಾನು ಈಗ ನಿನ್ನನ್ನು ಒಂದು ಮಾತನ್ನು ಕೇಳುತೇನೆ. ಸಕಲ ಶಾಸ್ತ್ರದಲ್ಲಿಯೂ ಚೆನ್ನಾಗಿ ತಿಳಿಯಲ್ಪಟ್ಟ ನಿನ್ನಸರ್ವಶಕ್ತಿಯು ದುಃಖಗಳನ್ನು ಹೋಗಲಾಡಿಸುವ ವಿಷಯದಲ್ಲಿಯೋ? ಅಥವಾ ಅವುಗಳನ್ನು ಕೊಡುವ ವಿಷಯದಲ್ಲಿಯೋ? ॥೧೩॥

ಕ್ಷುದ್ರೇಣ ಕೇನ ಚಿದಿಹ ಪ್ರವಿತೀರ್ಣಮಲ್ಪಂ
ದುಃಖಂ ನೃಪೇ ಕಿಲ ಜನಾ ವಿನಿವೇದಯನ್ತಿ ।
ನಾನ್ಯಃ ಪ್ರಭುಶ್ಚ ಪುರುಷೋತ್ತಮ! ತೇ ಯದಗ್ರೇ
ತ್ವದ್ದತ್ತದುಃಖನಿವಹಾನ್ವಿನಿವೇದಯಾಮಿ ॥ ॥೧೪॥

ಈ ಲೋಕದಲ್ಲಿ ಅಲ್ಪನಾದವನಿಂದ ಕೊಡಲ್ಪಟ್ಟ ಅಲ್ಪದುಃಖವನ್ನು ಜನಗಳು ರಾಜನಲ್ಲಿ ತಿಳಿಸಿಕೊಳ್ಳುವರು. ಎಲೈ ಪುರುಷೋತ್ತಮನೇ! ನಿನಗೆ ಬೇರೆ ಯಾರೂ ಪ್ರಭುವು ಇಲ್ಲವಲ್ಲ! ನಿನ್ನಿಂದ ಕೊಡಲ್ಪಟ್ಟ ದುಃಖಸಮೂಹಗಳನ್ನು ಯಾರ ಮುಂದೆ ನಾನು ತಿಳಿಸಿಕೊಳ್ಳಲಿ? ॥೧೪॥

ಲೋಕೇ ವಿಪನ್ನನಿವಹೈಃ ಪರಿಪೃಚ್ಛ್ಯಮಾನಃ
ಹೇತೂಂಸ್ತದೀಯವಿಪದಾಂ ಜಗದೀಶ್ವರತ್ವಾತ್ ।
ಸರ್ವಸ್ಯ ಸಾಂತ್ವನಮಶಕ್ಯಮಿತೀವ ಬುದ್ಧ್ವಾ
ಸರ್ವೈರದೃಶ್ಯತನುರೇವ ನಿಲೀಯಸೇತ್ವಮ್ ॥ ೧೫॥

ನೀನು ಲೋಕಕ್ಕೆಲ್ಲ ಈಶ್ವರನಾದ್ದರಿಂದ ಕಷ್ಟವುಳ್ಳ ಅನೇಕರಿಂದ ಅವರ ದುಃಖಗಳಿಗೆ ಕಾರಣಗಳನ್ನು ಕೇಳಲ್ಪಟ್ಟವನಾಗಿ, ಎಲ್ಲರ

ನ್ನೂ ಸಮಾಧಾನ ಮಾಡುವ್ರನು ಅಸಾಧ್ಯವೆಂದು ತಿಳಿದು ಯಾರಿಗೂ ಕಾಣದಂತೆ ಅವಿತುಕೊಂಡಿರುತ್ತಿ. ||೧೪||

ಅರೂಪಏವಾಸ್ಯವಲೋಕಿತುಂ ತ್ವಾಂ
ಅಗೋತ್ರಏವಾಹ್ವಾಯಿತುಂತ್ವದಾಖ್ಯಾಮ್ ।
ನಿರ್ಬದ್ಧು ಮಗ್ರಾಹ್ಯ ಇಹಾಸಿ ವಿಷ್ಣೋ !
ಕಥಂಮದಾರ್ತಿಃ ಪ್ರಶಮಂ ಪ್ರಯಾತು ॥ ೧೫||

ಎಲೈ ಸರ್ವವ್ಯಾಪಕನೆ ! ನಾನು ನಿನ್ನನ್ನುನೋಡಲು (ಪ್ರಾಕೃತ) ರೂಪವಿಲ್ಲದವನಾಗಿದ್ದಿ, ನಿನ್ನ ಹೆಸರನ್ನು ಕರೆಯಲು (ಕಲ್ಪಿತ) ಹೆಸರಿಲ್ಲದವನಾಗಿದ್ದಿ. ನಿನ್ನನ್ನುನಿರ್ಬಂಧಪಡಿಸಲು ಸಿಕ್ಕಲಾರದವನಾಗಿದ್ದಿ. ಹೀಗಾದರೆ ನನ್ನ ದುಃಖವು ಶಮನವಾಗುವ ಬಗೆ ಹೇಗೆ ? ||೧೫||

ಉಗ್ರೈ ಸ್ತಪೋಭಿರಪಿ ಭಕ್ತನುತಿಪ್ರಪಂಚೈಃ
ನಾವಾಪ್ಯಸೇಽಸುರಪುರೋಽಸಿ ರುಷಾಽವತೀರ್ಣಃ ।
ಸರ್ವಕ್ಲೇಶಾಪಹ!ಭವನ್ಮುಖದರ್ಶನಾಯ
ಕಿಂ ಕೋಪಯಾನಿ ವಚನೈಃ ಕ್ಷಮಿಣಾಂವರಂ ತ್ವಾಮ್ ॥ ೧೬||

ತೀವ್ರವಾದ ತಪಸ್ಸುಗಳಿಂದಲೂ, ಭಕ್ತರು ಮಾಡುವ ಸ್ತೋತ್ರಗಳಿಂದಲೂ ನೀನು ಹೊಂದಲ್ಪಡಲಾರೆ. ಆದರೆ-ಹಿರಣ್ಯಕಶಿಪು ಎಂಬ ಅಸುರನ ಮುಂದೆ ಕೋಪದಿಂದ ಕಾಣಿಸಿಕೊಂಡಿದ್ದಿ. ಸರ್ವ ಕ್ಲೇಶಗಳನ್ನೂ ನಾಶಮಾಡತಕ್ಕ ನಿನ್ನ ಮುಖವನ್ನು ನೋಡುವುದಕ್ಕಾಗಿ ಕ್ಷಮಾವಂತರಿಗೆಲ್ಲ ಶ್ರೇಷ್ಠನಾದ ನಿನ್ನನ್ನು (ಪರುಷ) ವಾಕ್ಯಗಳಿಂದ ಕೋಪಗೊಳಿಸಲೇ ? ||೧೬||

ಕಿಂ ದುಷ್ಕೃತಂ ನನು ಸಸರ್ಜಿಥ ಘೋರಪಾಕಂ
ಕಿಂ ವಾ ತದಾಚರಣಶಕ್ತಿ ಮಮುಷ್ಯ ಜಂತೋಃ ।
ಕಿಂ ದಂಡನಾಯ ನರಕಾ ನತಿದುಃಖರೂಪಾನ್
ಕಾ ವಾ ಜನಾರ್ದನ!ರತಿಃ ಪರಹಿಂಸನೇ ತೇ ॥ ||೧೭||

ಕ್ರೂರವಾದ ದುಃಖಗಳನ್ನುಕೊಡುವ ಪಾಪವನ್ನಾಗಲಿ, ಈಜಂತುವಿಗೆ ಆ ಪಾಪಗಳನ್ನುಮಾಡುವ ಶಕ್ತಿಯನ್ನಾಗಲಿ, ಪಾಪಮಾಡಿದವರನ್ನು ಶಿಕ್ಷಿಸುವುದಕ್ಕಾಗಿ ಅತಿ ದುಃಖಕರವಾದ ನರಕಗಳನ್ನಾಗಲಿ ಏತಕ್ಕೆ ಸೃಷ್ಟಿಸಿದೆ ? ಜನಾರ್ದನನೆಂಬ ನಿನ್ನ ಹೆಸರಿಗೆ ತಕ್ಕಂತೆ ಇತರರನ್ನು ಹಿಂಸಿಸುವ ವಿಷಯದಲ್ಲಿ ನಿನಗೇನು ಪ್ರೀತಿಯುಂಟು? ||೧೮||

ಶಾಸ್ತ್ರೋದಿತಾ ತವ ಕೃಪಾ ಜಗದೇಕಬಂಧೋ!
ಪಾಪೈರ್ವಿನಾ ಖಿಲವರ್ಷೈರ್ವನಚಂದ್ರಿಕೈವ ।
ಮನ್ಯೇ ತ್ವದೀಯಕರುಣಾಸಫಲತ್ವಹೇತೋಃ
ಪಾಪಾನ್ಯಹೋ! ಸೃಜಸಿ ಕೇನ ತು ನಾರಕಾಂಸ್ತ್ವಮ್ ॥ ೧೯||

ಎಲೈ ಲೋಕಕ್ಕೆಲ್ಲ ಮುಖ್ಯ ಬಂಧುವೇ ! ಅತಿ ಕ್ರೂರವಾದ ಪಾಪಗಳೇ ಇಲ್ಲದಿದ್ದರೆ ಶಾಸ್ತ್ರಗಳಲ್ಲಿಹೇಳಲ್ಪಡುವ ನಿನ್ನಕೃಪೆಯೆಂಬುದೇ ಕಾಡಿನಲ್ಲಿಕಾಯುವ ಬೆಳದಿಂಗಳಂತೆ ನಿರರ್ಥಕವಾಗುತ್ತಿತ್ತು. ನಿನ್ನಕೃಪೆ ಸಫಲವಾಗಲು ಪಾಪಗಳನ್ನುಸೃಷ್ಟಿಸಿದ್ದೀ ಯೆಂದು ತಿಳಿಯುತ್ತೇನೆ. ಆದರೆ ನರಕಗಳನ್ನೂ ಏತಕ್ಕೆ ಸೃಷ್ಟಿಸಿದೆಯೋ? ||೧೯||

ಈಶೋಽತ್ರ ಘೋರನರಕಾಂಸ್ತು ಭವಾನ್ ಸಸರ್ಜ
ವೇತ್ತಿ ಸ್ಮ ನೈವ ದುರಿತಸ್ಯ ಫಲಂ ಹತಾಘಃ ।
ದುಃಖಾನಿ ದೇವ! ಯದಿ ದುರ್ವಿಷಹಾಣ್ಯಮಂಸ್ಯತ್
ನೈಕಂ ಚ ಘೋರನರಕೇ ಸಮಪಾತಯಿಷ್ಯತ್ ॥ ೨೦||

ಸರ್ವೇಶ್ವರನಾದ ನೀನು ಕ್ರೂರವಾದ ನರಕಗಳನ್ನೇನೋ ಸೃಷ್ಟಿಮಾಡಿದೆ. ಪಾಪಶೂನ್ಯನಾದ ನೀನು ಪಾಪದಫಲವನ್ನುತಿಳಿಯಲಿಲ್ಲ! ಎಲೈ ದೇವನೆ ! ಸಹಿಸಲಶಕ್ಯವಾದ ದುಃಖಗಳನ್ನು ನೀನು ತಿಳಿದಿದ್ದರೆ ಒಬ್ಬನನ್ನೂ ಘೋರವಾದ ನರಕದಲ್ಲಿ ಬೀಳಿಸುತ್ತಿರಲಿಲ್ಲವು. ||೨೦||

ಭೂಮಿರ್ಭುವಸ್ಸ್ವರಿತಿ ಕ್ರಮಶೋ ಹ್ಯನಂತಾನ್
ಲೋಕಾನ್ವಿಚಿತ್ರರಚನಾನ್ ಬಹುಧಾ ಸೃಜಂಸ್ತ್ವಮ್ ।

ತತ್ರತ್ಯಸರ್ವಪುರುಷಾನ್ ಸುಖಿನೋ ವಿಧಾಯ
ಮಾಂ ಕೇವಲಂ ದುರಿತಭಾಜನಮಾತನೋಷಿ? ।

ಭೂಲೋಕ ಭುವರ್ಲೋಕ ಸುವರ್ಲೋಕವೆಂಬ ಕ್ರಮದಿಂದ ಆಶ್ಚರ್ಯವಾದ ನಿರ್ಮಾಣವುಳ್ಳ ಅನೇಕ ಲೋಕಗಳನ್ನು ಸೃಷ್ಟಿಸುವ ನೀನು ಅಲ್ಲಿರುವ ಎಲ್ಲರನ್ನೂ ಸುಖಿಗಳನ್ನಾಗಿಯೇ ಸೃಷ್ಟಿಸಿ ನನ್ನನ್ನು ಮಾತ್ರ ಏತಕ್ಕೆ ಪಾಪಗಳಿಗೇಸ್ಥಾನವಾಗಿ ಮಾಡುತ್ತೀ? ॥೨೦॥

ಜಂತುಃ ಕಪೂಯಚರಣೋ ಲಭತೇ ಶ್ವಜನ್ಮ
ಮರ್ತ್ಯೋಽಪಿ ರಮ್ಯಚರಣೋ ರಮಣೀಯಜನ್ಮ ।
ನಾಹಂ ಕಪೂಯಚರಣೋ ದ್ವಿಜಜನ್ಮಯುಕ್ತಃ
ನಾಪೀಹ ರಮ್ಯಚರಣೋ ದುರಿತಾಭಿಭೂತಃ ॥ ೨೧॥

ಕೆಟ್ಟ ಕಾರ್ಯವನ್ನು ಮಾಡುವ ಜಂತುವು ನಾಯಿ ಜನ್ಮವನ್ನೂ, ಒಳ್ಳೆಯ ಕಾರ್ಯವನ್ನು ಮಾಡುವ ಜಂತುವು ಉತ್ತಮವಾದ(ಬ್ರಾಹ್ಮಣ) ಜನ್ಮವನ್ನೂ ಹೊಂದುತ್ತದೆ. ಬ್ರಾಹ್ಮಣನಾಗಿ ಹುಟ್ಟಿರುವ ನಾನು ಕೆಟ್ಟ ಕರ್ಮವುಳ್ಳವನೆಂದು ಹೇಳಲಿಕ್ಕಿಲ್ಲ, ಪಾಪಗಳಿಂದ ತಿರಸ್ಕರಿಸಲ್ಪಟ್ಟಿರುವುದರಿಂದ ಒಳ್ಳೆಯ ಕರ್ಮವುಳ್ಳವನೆಂದೂ ಹೇಳಲಾಗದು. ॥೨೧॥

ವಾಚಾ ಮೃಗತ್ವಂ ವಪುಷಾ ದ್ರುಮತ್ವಂ
ಹೃದಾಂತ್ಯಜತ್ವಂ ಲಭತೇಽತ್ರ ಜಂತುಃ ।
ಹರೇ! ದ್ವಿಜಂ ಮಾಂ ತು ಸೃಜನ್ನಿವನ್ನಂ
ಬ್ರೂಷೇ ನಿಮಿತ್ತಂ ಕತಮನ್ನು ಕರ್ಮ ॥ ೨೩॥

ಎಲೈ ಆಶ್ರಿತರ ಪಾಪವನ್ನು ಪರಿಹರಿಸುವವನೇ! ಪ್ರಾಣಿ ಸಾಮಾನ್ಯವು ವಾಕ್ಕಿನ ಪಾಪದಿಂದ ಮೃಗಜನ್ಮವನ್ನೂ, ಶರೀರದ ಪಾಪದಿಂದ ವೃಕ್ಷಜನ್ಮವನ್ನೂ, ಮನಸ್ಸಿನ ಪಾಪದಿಂದ ಚಂಡಾಲ ಜನ್ಮವನ್ನೂ ಈ ಲೋಕದಲ್ಲಿ ಹೊಂದುತ್ತದೆ. ನನ್ನನ್ನು ಬ್ರಾಹ್ಮಣನನ್ನಾಗಿಯೂ ದುಃಖಿಯನ್ನಾಗಿಯೂ ಸೃಷ್ಟಿಸಿರುವ ನೀನು (ನನ್ನಜನ್ಮಕ್ಕೆ) ಯಾವ ವಿಧವಾದ ಕರ್ಮವನ್ನು ಕಾರಣವನ್ನಾಗಿ ಹೇಳುವೆ? ॥೨೪॥

ಕೌನ್ತೇಯಮಾತ್ಥ ಶಪಥಂ ಪ್ರವಿಧೇಹಿ ಪಾರ್ಥ
ಭಕ್ತೋ ಮಮಾತ್ರ ನ ಕದಾ ಚನ ನಶ್ಯತೀತಿ ।
ಲೋಕೇಧುನಾ ತು ಬಹುಶಃ ಪರಿಮೃಗ್ಯಮಾಣೇ
ಸರ್ವಾತ್ಮನಾತ್ರನಿಹತೋಽಸ್ಮಿ ತವೈವ ಭಕ್ತಃ ॥ ೨೪॥

"ಎಲೈ ಅರ್ಜುನನೆ ! ನನ್ನ ಭಕ್ತನಾದವನು ಎಂದಿಗೂ ನಾಶವನ್ನು ಹೊಂದಲಾರನುಎಂದು ಪ್ರತಿಜ್ಞೆ ಮಾಡು" ಎಂಬದಾಗಿ ಅರ್ಜುನನನ್ನು ಕುರಿತು ನೀನೇ ಹೇಳಿದ್ದೀ. ಈಗ ಈಲೋಕದಲ್ಲಿ ಸುತ್ತಲೂ ಹುಡುಕಿ ನೋಡಿದರೆ ನಾನು ನಿನ್ನ ಭಕ್ತನಾಗಿದ್ದುಕೊಂಡೇ ಸರ್ವ ಪ್ರಕಾರದಲ್ಲಿಯೂ ಕಷ್ಟವನ್ನು ಹೊಂದಿದೇನೆ. ॥೨೪॥

ಯೇ ಸರ್ವದೈವ ಪರಿನಿಂದಿತಕರ್ಮಭಾಜೋ
ನ ತ್ವಾಂ ಸ್ಮರಂತ್ಯನುಭವಂತಿ ಸುಖಾನಿ ತೇಽತ್ರ।
ಯೇ ತ್ವಾಮನನ್ಯಶರಣಾಶ್ಶರಣಂ ವ್ರಜಂತಿ
ತೇ ಯಾನ್ತಿ ದುಃಖನಿವಹಾನ್ ಯದಿ ಕಿಂ ವದಾಮಃ॥ ೨೫॥

ಯಾರುಸರ್ವಕಾಲದಲ್ಲೂ ವಿಶೇಷವಾಗಿ ನಿಂದಿತವಾದ ಕರ್ಮಗಳನ್ನೇ ಮಾಡುತ್ತಾ ನಿನ್ನನ್ನು ಸ್ಮರಿಸುವುದೂ ಇಲ್ಲವೋ, ಅವರು ಇಲ್ಲಿಯೇ ಸುಖಗಳನ್ನು ಅನುಭವಿಸುತ್ತಿದಾರೆ, ಯಾರು ಬೇರೆ ಗತಿಯಿಲ್ಲದಂತೆ ನಿನ್ನನ್ನೇ ರಕ್ಷಕನನ್ನಾಗಿ ಹೊಂದಿದಾರೆಯೋ, ಅವರೇ ದುಃಖಗಳನ್ನು ಹೊಂದುವರಾದರೆ ನಾವು ಹೇಳತಕ್ಕದು ಏನು ಇದೆ ? ॥೨೫॥

ಶಾಸ್ತ್ರೇಽಖಿಲೇ ಜನಹಿತಾಯ ಪುರಾವಿತೀರ್ಣೇ
ದೇವ ತ್ವಯೈವ ವಿಭುನಾ ಕರುಣಾರ್ಣವೇನ ।
ದೀನಾನುಕಂಪನಕೃತಿರ್ವಿಹಿತೋಽಸ್ತಿ ಧರ್ಮಃ
ಯಸ್ಮೈ ಮುಹುಸ್ತ್ವಮವತೇರಿಥ ಭೂತಲೇಷು॥ ೨೬॥

ಎಲೈ ದೇವನೇ! ಕೃಪಾಸಮುದ್ರನಾದನಿನ್ನಿಂದ ಜನಗಳ ಹಿತಕ್ಕಾಗಿ ಮೊದಲು ಕೊಡಲ್ಪಟ್ಟ ವೇದಶಾಸ್ತ್ರಗಳೊಳಗೆ ಕಷ್ಟಪಟ್ಟವರಲ್ಲಿ ದಯೆ

ತೋರಿಸತಕ್ಕದ್ದು ಧರ್ಮವೆಂದು ಹೇಳಲ್ಪಟ್ಟದೆ. ಯಾವ ಧರ್ಮಕ್ಕಾಗಿ ಯೇ ನೀನೂಸಹ ಅನೇಕಧಾ ಭೂಲೋಕದಲ್ಲಿ ಅವತರಿಸಿದ್ದೀಯೋ॥೨೬

ಧರ್ಮಾರ್ಜನೇ ಸಮಭವ ದ್ಯದಿ ತೇ ಮನೀಷಾ
ಕಿಂವಾ ತ್ವಯಾ ಭುವಿ ಕೃತಂ ನನು ದೀನಬಂಧೋ ।
ಲಕ್ಷ್ಮ್ಯಾ ಸಮಂ ಗತವತಾಽಪಿ ಮನುಷ್ಯಲೋಕಂ
ರಾಜ್ಯಂ ವಿಹಾಯ ಚರತಾ ವಿಪಿನಾಂತರೇಷು ॥ ೨೭॥

ಎಲೈ ದೀನಬಂಧುವೇ ! ಧರ್ಮವನ್ನು ಸಂಪಾದನ ಮಾಡಬೇಕೆಂಬ ಇಚ್ಛೆಯು ನಿನಗೆ ಇದ್ದರೆ ಲಕ್ಷ್ಮಿಯಸಂಗಡ ಭೂಲೋಕಕ್ಕೆ ಬಂದಾಗ್ಯೂ ರಾಜ್ಯವನ್ನು ಬಿಟ್ಟು ಅರಣ್ಯಮಧ್ಯದಲ್ಲಿ ಸಂಚಾರಮಾಡುವ ನಿನ್ನಿಂದ ಭೂಲೋಕದಲ್ಲಿ ಏನು ಮಾಡಲ್ಪಟ್ಟಿತು ? ॥೨೭॥

ನಾಲೋಚಿತಾ ಪಿತೃಪಿತಾಮಹರಾಜ್ಯಹಾನಿಃ
ನಾಲೋಚಿತಂ ಸ್ವನಗರಾದ್ವಿನಿವಾಸನಂ ತೇ ।
ನಾಲೋಚಿತೋಽಪಿ ವಿಷಮೇ ವಿಪಿನೇ ನಿವಾಸಃ
ನಾಲೋಚಿತ ಸ್ಸ್ವಜನನಿಜನಶೋಕಭಾರಃ ॥ ೨೮॥

ತಂದೆ ತಾತಂದಿರುಗಳ ಪರಂಪರೆಯಿಂದ ಬಂದ ರಾಜ್ಯವು ಅರಾಜಕವಾಗುತ್ತೆಂಬುದೂ, ರಾಜಕುಮಾರನಾದ ನಿನಗೆ ನಗರದಿಂದ ಪ್ರವಾಸ ಉಂಟಾಯಿತೆಂಬುದೂ, ಬಹಳ ಘೋರವಾದ ಅರಣ್ಯದಲ್ಲಿ ವಾಸಮಾಡಬೇಕಾಯಿತೆಂಬುದೂ, ನಿನ್ನ ತಾಯಿಯರೆಲ್ಲಾ ನಿನಗಾಗಿ ದುಃಖಪಡುತ್ತಾರೆಂಬುದೂ ಯೋಚಿಸಲ್ಪಡಲಿಲ್ಲವಲ್ಲಾ? ॥೨೮॥

ಸೋಢಃ ಪಿತುರ್ಮರಣಜೋ ವಿಪುಲೋಽಪಿ ಶೋಕಃ
ಸೋಢೋಽಪಿ ಯಾತುಜನತಾಕೃತವಿಪ್ರಲಂಭಃ ।
ಸೋಢೋ ಗುರುಃ ಪ್ರಿಯತಮಾವಿರಹೋಽತಿಘೋರಃ
ಸೋಢ ಸ್ತಥಾ ಪಿತೃಸಖಸ್ಯ ಖಗಸ್ಯ ನಾಶಃ ॥ ೨೯ ॥

ನಿನ್ನ ಅಗಲುವಿಕೆಯನ್ನು ಸಹಿಸಲಾರದೆ ತಂದೆ ಸತ್ತು ಹೋದ ದುಃಖ ವೂ, ರಾಕ್ಷಸಜನಗಳಿಂದ ಮಾಡಲ್ಪಟ್ಟ ವಂಚನೆಗಳೂ, ಭಾರ್ಯಾವಿಯೋಗ ರೂಪವಾದ ಮಹಾಘೋರವಾದ ದುಃಖವೂ, ತಂದೆಯ ಸ್ನೇಹಿತನಾದ ಜಟಾಯುವಿನವಿನಾಶದದುಃಖವೂ ಎಲ್ಲವೂನಿನ್ನಿಂದ ಸಹಿಸಲ್ಪಟ್ಟಿತು॥೨೯॥

ಸೀತಾ ವನಂ ಸುಲಲಿತಾ ಜನಕೇಂದ್ರಕನ್ಯಾ
ದುರ್ಗೇಷು ಯಾ ದೃಷದಿ ಸಾಭರಣೈವ ಸುಪ್ತಾ ।
ಸಾ ಘೋರಯಾತುವೃಕಹಸ್ತಗತಾಽತಿದೀನಾ
ರಕ್ಷಸ್ಸ್ವಸೀಪರಿವೃತಾ ಸುಚಿರಂ ವ್ಯಲಾಪೀತ್ ॥ ೩೦॥

ಜನಕರಾಜನ ಮಗಳಾಗಿ ಅತಿಸುಕುಮಾರಿಯಾದ ಸೀತಾದೇವಿ ಯು ಅರಣ್ಯಕ್ಕೆ ಕರದುಕೊಂಡು ಹೋಗಲ್ಪಟ್ಟಳು, ಯಾವ ಸೀತೆಯು ಅರಣ್ಯದಲ್ಲಿ ತೊಟ್ಟಿದ್ದ ಆಭರಣಗಳೊಡನೆಯೇ ಕಲ್ಲಿನ ಮೇಲೆ ಮಲ ಗಬೇಕಾಯಿತೋ, ಅಂಥಾ ಸೀತೆಯು ರಾವಣನೆಂಬ ತೋಳನಕೈಗೆ ಸಿಕ್ಕಿ ಕೊಂಡು ರಾಕ್ಷಸಿಯರೆಂಬ ಹೆಣ್ಣುನಾಯಿಗಳಿಂದ ಸುತ್ತಲ್ಪಟ್ಟವಳಾಗಿ ಬಹಳಕಾಲ ಅಳುವಂತೆ ಆಯಿತು. ॥೩೦॥

ತ್ವಂ ಸಾರ್ವಭೌಮತನಯೋಽಪಿ ವನೇ ಚರಂತಂ
ಕಂಚಿತ್ತು ಮರ್ಕಟ ಮುಪೈಷಿ ಶರಣ್ಯದೃಷ್ಟ್ಯಾ ।
ಕೋ ವೇತ್ತಿ ರಾವಣವಧೇ ಭವತಃ ಪ್ರಯಾಸಾ
ನಾದ್ಯಾಪಿ ಕಿಂ ಸ್ಮರಸಿ ಧರ್ಮರುಚೇ ದಶಾಸ್ತೇ ॥ ೩೧॥

ನೀನು ಚಕ್ರವರ್ತಿಯ ಕುಮಾರನಾಗಿ ಅರಣ್ಯದಲ್ಲಿ ಎಲ್ಲಿಯೋ ತಿರು ಗುತ್ತಿದ್ದ ಯಾವುದೋ ಒಂದು ಕಪಿಯನ್ನು ರಕ್ಷಕನೆಂಬ ಜ್ಞಾನದಿಂದ ಹೊಂದಿದ್ದೀಯೆ, ರಾವಣವಧೆಯನ್ನು ಮಾಡುವುದಕ್ಕಾಗಿ ನೀನು ಅನುಭ ವಿಸಿದ ಕಷ್ಟಗಳನ್ನು ತಿಳಿಯುವವರು ಯಾರು ? ಧರ್ಮಕ್ಕೋಸ್ಕರ ಆಶಪ ಟ್ಟ ನಿನ್ನ ಅವಸ್ಥೆಗಳನ್ನು ಇನ್ನೂ ಸ್ಮರಿಸಲಾರೆಯಾ ? ॥೩೧॥

ತ್ವಂ ಮರ್ತ್ಯಭಾವ ಮುಪಗಮ್ಯ ನಿಜೇಚ್ಛಯೈವ
ದುಃಖಾನ್ಯವಾಪಿಥ ಮಹಾನ್ತಿ ತು ರಾಘವಸ್ಸನ್ ।

ಏವಂ ಭವೇತ್ಯದಿ ಹತಾಘಗಣಸ್ಯ ತೇಽಪಿ
ವಾರ್ತಾ ನು ಕಾ ಜನಿಮತೋ ಮಮ ಕರ್ಮವೇಗಾತ್ ॥ ೩೨॥

ಸ್ವತಂತ್ರನಾದ ನೀನು ನಿನ್ನ ಇಚ್ಛೆಯಿಂದಲೇ ಮನುಷ್ಯಸಮಾನವಾದ ಆಕಾರವುಳ್ಳ ರಾಘವನಾಗಿ ಅವತರಿಸಿದ ಮಾತ್ರಕ್ಕೆ ಅನೇಕ ದುಃಖಗಳನ್ನು ಅನುಭವಿಸಿದೆ. ಸಮಸ್ತಪಾಪನಿವರ್ತಕನಾದ ನಿನಗೇ ಹೀಗಾಗಲಾಗಿ ಕರ್ಮವೇಗದಿಂದ ಉತ್ಪತ್ತಿಯುಳ್ಳ ನನ್ನ ಸಮಾಚಾರವನ್ನು ಏನೆಂದು ಹೇಳಬಹುದು ? ॥೩೨॥

ವೇದೇಽಗ್ನಿಷೋಮಪಶುಘಾತವಿಧಿಪ್ರಬಾಧ್ಯಾ
ಹ್ಯೌತ್ಸರ್ಗಿಕೀ ಸಕಲಭೂತವಧಾನ್ನಿವೃತ್ತಿಃ ।
ಶೌರೇ! ಽಖಿಲಾವನವಿಧೌ ಚ ಕೃತಾಂ ಸ್ವಸಂಧಾಂ
ಸಂಕೋಚಯಸ್ಯಹಹ! ಮಾಂ ತ್ವಮುಪೇಕ್ಷಮಾಣಃ॥ ೩೩॥

ಎಲೈ ಶೌರಿಯೆ! ಯಾವ ಪ್ರಾಣಿಯನ್ನೂ ಹಿಂಸಿಸಕೂಡದೆಂಬ ಸಾಮಾನ್ಯಶಾಸ್ತ್ರಕ್ಕೆ ಅಗ್ನಿಷೋಮೋದ್ದೇಶ್ಯಕವಾದ ಯಾಗದಲ್ಲಿ ಪಶುಘಾತವನ್ನು ವಿಧಿಸುವವಿಶೇಷಶಾಸ್ತ್ರದಿಂದ ಬಾಧೆಬರುವುದಾದ್ದರಿಂದ ಸಾಮಾನ್ಯವಿಧಿಗೆ ಸಂಕೋಚವೆಂಬ ನ್ಯಾಯವು ವೇದದಲ್ಲಿ ಮಾತ್ರ ಇರಬಹುದು, ನೀನು ನನ್ನನ್ನು ಮಾತ್ರ ಉಪೇಕ್ಷಿಸುವವನಾಗಿ, ಎಲ್ಲರನ್ನೂ ರಕ್ಷಿಸುತ್ತೇನೆಂದು ಸಾಮಾನ್ಯವಾಗಿ ಮಾಡಿದ ನಿನ್ನ ಪ್ರತಿಜ್ಞೆಯನ್ನೂ ನನ್ನ ದೆಸೆಯಿಂದ ಸಂಕೋಚಿಸುವವನಾಗುತ್ತಿ ಅಹಹ ! ॥೩೩॥

ಪಿತುರ್ದಯಾಲೋರ್ನ ಕದಾಪಿ ಯುಕ್ತಾ
ಪುತ್ರೇಷ್ವನೇಕೇಷು ವಿಭಿನ್ನದೃಷ್ಟಿಃ ।
ಜಗತ್ಪಿತುಸ್ತೇ ಕಥಮೇತದರ್ಹಂ
ನಾಲೋಕಸೇ ಮಾಂ ಕರುಣಾರ್ದ್ರದೃಷ್ಟ್ಯಾ ॥ ೩೪॥

ದಯಾಳುವಾದ ಒಬ್ಬ ತಂದೆಗೆ ತನ್ನ ಅನೇಕಮಕ್ಕಳಲ್ಲಿ ಬೇರಬೇರೆ ದೃಷ್ಟಿಯು ಯಾವಾಗಲೂ ಯುಕ್ತವಾದದ್ದಲ್ಲವು. ಲೋಕಕ್ಕೆಲ್ಲಾ ತಂದೆ

ಯಾದನಿನಗೆ ನನ್ನನ್ನು ಮಾತ್ರ ಕೃಪೆಯಿಂದ ತಣ್ಣಗಿರುವ ದೃಷ್ಟಿಯಿಂದ ನೋಡದೆಯೇ ಇರುವುದು ಯುಕ್ತವೇ ? ॥೩೪॥

ಸೂರ್‍ಯೋ ಮೃಗಾಂಕಶ್ಚವಿಲೋಚನೆ ತೇ
ನಾಸ್ತ್ಯೇತಯೋಃ ಕ್ವಾಪಿ ಸಹಾಸಭಾವಃ ।
ಪಶ್ಯನ್ ದೃಶಾ ಶೀತಲಯಾ ತ್ವಮನ್ಯಾನ್
ಉಗ್ರೇಣ ನೇತ್ರೇಣ ವಿಲೋಕಸೇ ಮಾಮ್ ॥ ೩೫॥

ಸೂರ್‍ಯಚಂದ್ರರುಗಳೇ ನಿನಗೆ ಕಣ್ಣುಗಳಾಗಿದಾರೆ. ಅವರಿಬ್ಬರಿಗೂ ಯಾವಾಗಲೂ ಏಕರೂಪತ್ವವಿಲ್ಲ (ಆದ್ದರಿಂದಲೆ) ಇತರರನ್ನೆಲ್ಲಾ ಶೀತಲವಾದ ಕಣ್ಣಿನಿಂದ ನೋಡುವ ನೀನು ನನ್ನನ್ನು ಮಾತ್ರ ಉಗ್ರವಾದ ದೃಷ್ಟಿಯಿಂದ ನೋಡುತ್ತೀ ॥೩೫॥

ಕೂಪೇ ಶಿಶುಂ ನಿಪತಿತಂ ನಿಜಕರ್ಮದೋಷಾತ್
ದೃಷ್ಟ್ವಾಪ್ಯಬಂಧು ರಪಿ ರಕ್ಷಿತುಮುತ್ಸಹೇತ ॥
ತ್ವದ್ದತ್ತಜನ್ಮವಿವಶಂ ಕ್ಷಿಪಸಿ ತ್ವಮೇವ
ದುಃಖಾರ್ಣವೇ ಕಿಮಥವಾ ಕರುಣಾಕರೋಽಸಿ ॥ ೩೬॥

ತನ್ನ ತಪ್ಪಿಸಿಂದಲೇ ಬಾವಿಯಲ್ಲಿ ಬಿದ್ದಿರುವ ಒಂದು ಮಗುವನ್ನು ನೋಡಿ ಬಂಧುವಲ್ಲದವನೂ ಅದನ್ನು ರಕ್ಷಿಸಲು ಪ್ರಯತ್ನಪಡಬೇಕು, ನಿನ್ನಿಂದ ಕೊಡಲ್ಪಟ್ಟ ಜನ್ಮದಿಂದ ಪರವಶನಾಗಿರುವ (ನನ್ನನ್ನು) ನೀನಾಗಿಯೇ ದುಃಖಸಮುದ್ರದಲ್ಲಿ ಹಾಕುವೆ,ಅಥವಾ ನೀನೇಕೃಪಾಸಮುದ್ರನಾಗಿದ್ದೀಯೆ (ನಾವೇನುಹೇಳತಕ್ಕದ್ದು ?) ॥೩೬॥

ದಂಡಸ್ಸಕೃತ್ಫಲು ಭವೇ ದ್ವಿಹಿತೇಷ್ವಘೇಷು
ಲಬ್ಧೋಮಯಾಪ್ಯಸಕೃದೇವ ಸ ತೀಕ್ಷ್ಣರೂಪಃ।
ಶ್ರಾಂತಿರ್ನ ತೇ ದುರಿತಸರ್ಗವಿಧಾವಪಾರೆ
ನ ತ್ವಾಂ ರುಣದ್ಧಿ ಕರುಣಾಽಪಿ ಚ ದುಃಖದಾನಾತ್ ॥ ೩೭॥

ಅನೇಕಪಾಪಗಳು ಮಾಡಲ್ಪಟ್ಟಾಗ್ಯೂ ಒಂದಾವರ್ತಿ ಶಿಕ್ಷೆಯನ್ನು ಕೊಡುವುದು ಉಚಿತವಾದದ್ದು--ನನ್ನಿಂದಲಾದರೋ ತೀವ್ರರೂಪವಾದ ಆ ದಂಡನವು ಅನೇಕಾವರ್ತಿ ಅನುಭವಿಸಲ್ಪಟ್ಟಿತು. ಅಪಾರವಾದ ಪಾಪಗಳ ನಿರ್ಮಾಣಗಳಲ್ಲಿ ನಿನಗೆ ಸೋಲುವಿಕೆಯುಂಟಾಗಲಿಲ್ಲವೇ? ಕೃಪೆಯೆಂಬುದಾದರೂ ನಿನ್ನನ್ನು ದುಃಖಕೊಡದಂತೆ ತಡೆಯುವುದಿಲ್ಲವೇ ? ॥೩೭॥

ಕಾಮಾತುರಾಣಾಂ ಭುವಿ ನಾಸ್ತಿ ಲಜ್ಜೆ ತ್ಯೇಷಾ
ಜನೋಕ್ತಿ ಸ್ತ್ವಯಿ ನಾಥ ಯುಕ್ತಾ।
ಭಕ್ತಾವನಾತ್ಯುತ್ಕಟಕಾಮನಿಘ್ನಃ
ಕಾಂ ಕಾಂ ತನುಂ ಹ್ರೀವಿಧುರ ಸ್ತನೋಷಿ ॥ ೩೮॥

ಎಲೈ ನಾಥನೆ! ಭೂಲೋಕದಲ್ಲಿ ಕಾಮಾತುರರಾದಂಥವರಿಗೆ ಲಜ್ಜೆಯಿಲ್ಲವೆಂಬ ಜನಪ್ರವಾದವು ನಿನ್ನಲ್ಲೇ ಯುಕ್ತವಾಗಿದೆ! ಭಕ್ತರಾದವರನ್ನು ರಕ್ಷಿಸಬೇಕೆಂಬ ಹೆಚ್ಚಾದ ಕಾಮಕ್ಕೆ ಅಧೀನನಾದನೀನು ಲಜ್ಜೆಯನ್ನು ಬಿಟ್ಟು, ಯಾವಯಾವಶರೀರವನ್ನಾದರೂ ಪರಿಗ್ರಹಿಸುತ್ತೀಯಷ್ಟೆ?॥೩೮॥

ನಾಹಂ ಜಲೇಽಸ್ಮಿ ನಚ ಪಂಕಚಯೆ ನ ಭೂಮಾ
ನೈವಾಂಬರೆ ನ ನಿರಯೆ ಕಿಮು ನಾಕವಾರ್ತಾ ।
ದುರ್ವಾರಘೋರಭವದಾವಮಹಾಗ್ನಿಕೀಲ-
ಮಧ್ಯೆ ಸ್ಥಿತೋಽಸ್ಮಿ ಕುರುಷೆ ಕಿಮಿಹಾವತಾರೈಃ ॥ ೩೯॥

ನಾನು ಜಲದಲ್ಲಿಲ್ಲ, ಕೆಸರಿನಲ್ಲಿಲ್ಲ, ಭೂಮಿಯಲ್ಲಿರುವ ಹಾಗಿಲ್ಲ ಆಕಾಶದಲ್ಲಿಲ್ಲವೇ ಇಲ್ಲ. ನರಕದಲ್ಲೂ ಇಲ್ಲ, ಸ್ವರ್ಗದ ಮಾತೇನು ? ತಡೆಯುವುದಕ್ಕೆ ಅಸಾಧ್ಯವಾಗಿಯೂ, ಭಯಂಕರವಾಗಿಯೂ ಇರುವ ಸಂಸಾರವೆಂಬ ದೊಡ್ಡ ಅಗ್ನಿ ಜ್ವಾಲೆಯ ಮಧ್ಯದಲ್ಲಿರುತ್ತೇನೆ. ನಿನ್ನ ಅವತಾರಗಳಿಂದ ಏನುಮಾಡುವೆ ? ॥೩೯॥

ಕೃತ್ವಾಽವತಾರನಿವಹಾನಸಿ ಭಿನ್ನರೂಪಾನ್
ಭ್ರಾಂತ್ವಾಽಪಿ ಪಂಕಧರಣೀಜಲಕಾನನೇಷು

ತ್ವದ್ದೃಷ್ಟಿನಾಶ್ಯಕಲುಷಾಪ್ಯನುಗೃಹ್ಣತೋ ಮಾಂ
ಉದ್ಘುಷ್ಯತೇ ಶ್ರುತಿಗಣೇ ತವ ಕಾನು ಶಕ್ತಿಃ॥ ೪೦॥

ನಾನಾ ರೂಪಗಳಾದ ಅವತಾರಗಳನ್ನು ಮಾಡಿಯೂ, ಕೆಸರು, ಭೂಮಿ, ನೀರು, ಅರಣ್ಯ ಇವುಗಳಲ್ಲಿ ಸುತ್ತಿಯೂ, ನಿನ್ನ ದೃಷ್ಟಿಮಾತ್ರದಿಂದಲೇ ನಾಶವಾಗುವ ಪಾಪಗಳಿಂದ ಹಿಡಿಯಲ್ಪಟ್ಟಿರುವ ನನ್ನನ್ನು ಹಿಡಿಯಲಾರದ ನಿನ್ನ ಶಕ್ತಿಯು ವೇದಗಳ ಸಮೂಹದಲ್ಲೆಲ್ಲಾ ಏನೆಂದು ಹೊಗಳಲ್ಪಡುತ್ತಿದೆಯೋ ? ॥೪೦॥

ಜೀವಾನ್ವಿಭೋ ಪ್ರಲಯಸೀಮನಿ ಲೀನರೂಪಾನ್
ಯುಕ್ತ್ವಾ ಕಲೇಬರಹೃಷೀಕಗಣೈರನಂತೈಃ ।
ತಾನ್ನೇತುಮಿಚ್ಛಸಿ ದಯಾರ್ದ್ರಮನಾ ವಿಮುಕ್ತಿಂ
ಪಾಪಾನಿ ನೋ ವಿಫಲಯಂತಿ ತು ತೇ ಪ್ರಯಾಸಾನ್ ॥ ೪೧॥

ಎಲೈ ಪ್ರಭುವೆ! ಕೃಪೆಯಿಂದ ತಣ್ಣಗಿರುವ ಮನಸ್ಸುಳ್ಳನೀನು ಪ್ರಲಯದಲ್ಲಿ (ಪ್ರಕೃತಿಯಲ್ಲಿ) ಅಡಗಿಕೊಂಡಿರುವ ಜೀವಾತ್ಮಗಳನ್ನು ಶರೀರೇಂದ್ರಿಯಗಳೊಡನೆ ಸೇರಿಸಿ (ಕರ್ಮಕ್ಷಯಮಾಡಿಸಿ) ಅವರನ್ನೆಲ್ಲಾ ಮೋಕ್ಷವನ್ನು ಹೊಂದಿಸಲು ಪ್ರಯತ್ನಪಡುತ್ತೀಯೆ. ಆದರೆ ನಮ್ಮ ಪಾಪಗಳು ನಿನ್ನ ಪ್ರಯಾಸಗಳನ್ನು ವ್ಯರ್ಥಪಡಿಸುತ್ತಿವೆ, ॥೪೧॥

ಕಿಂ ಯುಜ್ಯತೇ ಸ್ವತನಯೇಷು ಗತೇಷು ಶೋಕಂ
ತಾತಸ್ಯ ಪೂರ್ಣಕರುಣಸ್ಯ ನಿಕಾಮತುಷ್ಟಿಃ ।
ಏವಂಹಿ ಮಾದೃಶಜನೇ ಪರಿತಪ್ಯಮಾನೇ
ಕಾ ತುಷ್ಟಿರಬ್ಜನಯನಾಸ್ತಿ ಜಗತ್ಪಿತುಸ್ತೇ॥ ೪೨॥

ಪೂರ್ಣವಾದ ಕೃಪೆಯುಳ್ಳ, ಒಬ್ಬ ತಂದೆಗೆ ತನ್ನ ಮಕ್ಕಳು ದುಃಖಪಡುತ್ತಿರುವಾಗ ಹೆಚ್ಚಾಗಿ ಸಂತೋಷಪಡುವುದು ಯುಕ್ತವೆ? ಎಲೈ ಕಮಲದಂತೆ ಕಣ್ಣುಳ್ಳವನೆ ಲೋಕಕ್ಕೆಲ್ಲಾ ತಂದೆಯಾದ ನಿನಗೆ ನಾವೆಲ್ಲರೂ ಹೀಗೆ ದುಃಖಪಡುತ್ತಿರುವಾಗ ಯಾವಸಂತೋಷ ಉಂಟು? ॥೪೨॥

ನ ತ್ವಂ ಶೃಣೋಷಿ ಮಮ ವಾಚಮುಪೀಹ ದೀನಾಂ
ಕಸ್ಯಾಪರಸ್ಯ ಪುರತೋ ವಿನಿವೇದಯಾಮಿ ।
ಜಾನನ್ ಕೃಪಾಂ ಕಮಲಲೋಚನ ತೇ ಮುರಾರೇ
ಕಂ ವಾನ್ಯಮೇಮಿ ಶರಣಂ ಜಡ ಮಲ್ಪಶಕ್ತಿಮ್ ॥ ೪೩॥

ಎಲೈ ಕಮಲದಂತೆ ಕಣ್ಣುಗಳುಳ್ಳವನೆ ! ಎಲೈ ಮುರಶತ್ರುವೆ! ನನ್ನ ದೀನವಾದ ಮಾತನ್ನು ನೀನೂ ಕೇಳದೇನೇ ಇದ್ದರೆ ನಾನು ಇನ್ಯಾರಲ್ಲಿ ತಿಳಿಸಿಕೊಳ್ಳಲಿ, ನಿನ್ನ ಕೃಪೆಯನ್ನೂ ತಿಳಿದು ಅನ್ಯರನ್ನು ಅಜ್ಞರೆಂದೂ ಅಶಕ್ತರೆಂದೂ ತಿಳಿದಿರುವ ನಾನು ಇನ್ಯಾರನ್ನು ರಕ್ಷಕರೆಂದು ಹೊಂದಲಿ.?॥೪೩

ಸ್ತೋಭಾತ್ಮಕಂ ಚ ತವ ನಾಮ ಕೃಪಾಮೃತಾಬ್ಧೇ !
ಸರ್ವಾಘನಾಶಕಮಿತಿ ಪ್ರವದನ್ತಿ ಸನ್ತಃ ।
ಕಿಂ ವಾ ಮಯಾ ನ ಕಥಿತಂ ತವ ನಾಮ ಭಕ್ತ್ಯಾ
ದಿಕ್ಶ್ರೋತ್ರ ತೇ ಶ್ರುತಿಪಥೇ ಪತಿತಂ ನ ಕಿಂ ತತ್ ॥ ೪೪॥

ಎಲೈ ಕೃಪಾಸಮುದ್ರನೆ! ಅರ್ಥಜ್ಞಾನವಿಲ್ಲದೆ ಹೇಳಲ್ಪಟ್ಟಾಗ್ಯೂ ನಿನ್ನ ಹೆಸರು ಸರ್ವಪಾಪನಾಶಕವೆಂದು ಪ್ರಾಜ್ಞರು ಹೇಳುತ್ತಾರೆ. ನಿನ್ನ ಹೆಸರು ನನ್ನಿಂದಾ ಭಕ್ತಿಯೊಡನೆ ಹೇಳಲ್ಪಡಲ್ಲಿಲ್ಲವೆ? ಎಲೈದಿಕ್ಕುಗಳೆಲ್ಲಾ ಕಿವಿಯಾಗಿ ಉಳ್ಳವನೆ! ನಿನ್ನ ಕಿವಿಯಮಾರ್ಗದಲ್ಲಿ ಅದು ಬೀಳಲೇ ಇಲ್ಲವೆ?

ಸರ್ವಸ್ಯ ಚಾಸಿ ಹೃದಯೇ ಭುವನಾನ್ತರಾತ್ಮನ್
ಮಂತ್ರಾನ್ ಶೃಣೋಷಿ ಜಪತೋಽಪಿ ನರಸ್ಯ ಗೂಢಮ್ ।
ಏವಂ ಸ್ಥಿತೇಽಪಿ ನ ಶೃಣೋಷಿ ಮಮೈವ ವಾಚಂ
ಕ್ರೋಶಾಮಿ ಕಿಂ ಶ್ರವಣಯೋಸ್ತವ ತಾರತಾರಮ್ ॥ ೪೫॥

ಎಲೈ ಜಗದಂತರ್ಯಾಮಿಯಾದವನೆ! ಎಲ್ಲಾಪ್ರಾಣಿಗಳ ಹೃದಯದಲ್ಲಿಯೂ ವಾಸಮಾಡುವನೀನ-ಗುಟ್ಟಾಗಿಜಪಮಾಡುವ ಮನುಷ್ಯನ ಮಂತ್ರಗಳನ್ನೂ ಸಹ ಕೇಳುತ್ತೀ ಹೀಗಿದ್ದಾಗ್ಯೂ ನನ್ನ ಮಾತನ್ನುಮಾತ್ರ ನೀನು ಕೇಳಲಾರಿಯಾ ! ನಿನ್ನ ಕಿವಿಗಳಲ್ಲಿ ಬಹಳ ಘಟ್ಟಿಯಾಗಿ ಕೂಗಿಕೊಳ್ಳಲೆ.

ಶೌರೇ! ದಯಾಲೋ! ಅಚ್ಯುತ! ದೀನಬಂಧೋ!
ಹರೇ! ಪ್ರಭೋ! ಕೇಶವ! ಲೋಕನಾಥ! |
ಕಿಂ ಮಾಂ ಭವಾಗ್ನೌ ಪತಿತಂ ವಿಷಣ್ಣಂ
ನ ಸಿಂಚಸಿ ತ್ವತ್ಕರುಣಾರ್ದ್ರದೃಷ್ಟ್ಯಾ || ೪೬||

ಎಲೈ ಶೂರನಾದವಸುದೇವನ ಮಗನೆ! ಎಲೈ ದಯಾಶೀಲನೇ! ಎಲೈ ಭಕ್ತರನ್ನು ಬಿಡದೆ ಇರುವವನೇ! ಎಲೈ ದೀನರಾದವರಿಗೆ ಬಂಧುವಾದವನೇ! ಎಲೈ ಭಕ್ತರ ಪಾಪಗಳನ್ನು ಹೋಗಲಾಡಿಸುವವನೇ! ಎಲೈ ಸ್ವಾಮಿಯೇ! ಎಲೈ ಉತ್ತಮವಾದ ಮುಂಗುರುಳುಗಳುಳ್ಳವನೇ! ಎಲೈ ಲೋಕನಾಥನೇ! ಸಂಸಾರವೆಂಬ ಬೆಂಕಿಯಲ್ಲಿ ಬಿದ್ದು ಸಂಕಟಪಡುತ್ತಿರುವ ನನ್ನನ್ನು ನೀನು ಕೃಪೆಯಿಂದ ತಣ್ಣಗಿರುವ ನಿನ್ನ ದೃಷ್ಟಿಯಿಂದ ಏತಕ್ಕೆ ನೆನೆಸುವುದಿಲ್ಲಾ? ||೪೬||

ಕ್ರೋಶಾನಿ ತಾರತರಮೇವ ಲುಠಾನಿ ಭೂಮೌ
ಮಜ್ಜಾನಿ ವಾ ಜಲನಿಧೌ ಪ್ರಪತಾನಿ ಶೈಲಾತ್ |
ವ್ಯಾಘ್ರೀಮುಖೇ ಕಿಮು ವಿಶಾನಿ ನಿತಾಂತಖೇದಾತ್
ನಾದ್ಯಾಪಿ ಪಶ್ಯಸಿ ವಿಭೋ! ಕೃಪಣಂ ಜನಂ ಮಾಮ್|| ೪೭||

ಎಲೈ ಪ್ರಭುವೆ! ಕೃಪಣನಾದ ನನ್ನನ್ನು ಇನ್ನೂ ನೀನು ನೋಡುವುದಿಲ್ಲವಲ್ಲಾ. ಇನ್ನೂ ಘಟ್ಟಿಯಾಗಿಯೆ ಕೂಗಿಕೊಳ್ಳಲೆ? ಭೂಮಿಯ ಮೇಲೆ ಹೊರಳಾಡಲೆ, ಸಮುದ್ರದಲ್ಲಿ ಮುಳುಗಿಕೊಳ್ಳಲೆ, ಪರ್ವತದ ಮೇಲಿಂದ ಬೀಳಲೆ ಬಹಳ ಕಷ್ಟದಿಂದ ಹೆಣ್ಣುಹುಲಿಯ ಬಾಯಿಯಲ್ಲಿ ಪ್ರವೇಶಿಸಲೆ, ||೪೭||

ಕೃಷ್ಣ! ಶ್ರೀವಾಸ! ಶೌರೇ! ಮುರಹರ! ನೃಹರೇ! ರಾಮ! ಪದ್ಮಾಕ್ಷ! ವಿಷ್ಣೋ!
ಸ್ವಾಮಿನ್! ಲೋಕೇಶ! ಕಾಮಪ್ರದ! ಮಧುಮಥನ! ಶ್ರೀಪತೇ! ಪದ್ಮನಾಭ! |
ಸರ್ವಾತ್ಮನ್! ದೀನಬಂಧೋ! ಯದುಕುಲತಿಲಕ! ಬ್ರಹ್ಮನಿಘ್ನ! ಚಕ್ರಪಾಣೇ!
ಶಾರ್ಙ್ಗಿನ್! ಅಕ್ಷ್ಮೇಶ! ಸರ್ವಶ್ರುತಿಗಣವಿನುತ! ತ್ವಾಂ ಕದಾ ವೀಕ್ಷೇ ಮಾಮ್

ಎಲೈ ಭುಕ್ತಿಮುಕ್ತಿಪ್ರದನಾದವನೆ, ಎಲೈ ಶ್ರೀನಿವಾಸನೆ, ಎಲೈ ಶೂರನಾದ ವಾಸುದೇವನ ಮಗನೆ, ಎಲೈ ಮುರಶತ್ರುವೆ,ಎಲೈ ನರಸಿಂಹನೇ, ಎಲೈ ವಾಮನನೆ, ಎಲೈ ಕಮಲಾಕ್ಷನೆ, ಎಲೈ ಸರ್ವವ್ಯಾಪಕನೆ, ಎಲೈ ಒಡೆಯನೆ, ಎಲೈ ಲೋಕನಾಥನೆ,ಎಲೈ ಇಷ್ಟಾರ್ಥಗಳನ್ನೆಲ್ಲಾ ಕೊಡುವವನೆ, ಎಲೈ ಮಧುಶತ್ರುವೆ,ಎಲೈ ಶ್ರೀಪತಿಯೇ, ಎಲೈ ಕಮಲನಾಭನೆ,ಎಲೈ ಸರ್ವಾತ್ಮಕನೆ, ಎಲೈ ದೀನಜನರಿಗೆ ಬಾಧುವಾದವನೆ,ಎಲೈ ಯದುವಂಶಕೆ ತಿಲಕದಂತಿರುವವನೆ, ಎಲೈ ಭೂನಾಥನೇ, ಎಲೈ ಚಕ್ರಪಾಣಿಯೆ, ಎಲೈ ಶಾರ್ಙ್ಗಪಾಣಿಯೆ, ಎಲೈ ಆತ್ಮ ಪ್ರಭುವೆ, ಎಲೈಸರ್ವವೇದಗಣಸ್ತುತನಾದವನೆ, ನೀನು ನನ್ನನ್ನುಯಾವಾಗನೋಡುತ್ತೀಯಪ್ಪಾ ! ॥೪೮

ಶ್ರೋತುಂ ವಿಲಾಪಾನಸಿ ಕರ್ಣಹೀನಃ
ದ್ರಷ್ಟುಂ ಮಮಾರ್ತೀರಸಿ ನೇತ್ರಹೀನಃ ।
ಬಂಧಂ ಚ ಮೇ ಮೋಚಯಿತುಂ ಹ್ಯಪಾಣಿಃ
ಕಿಂ ಮೇ ಪ್ರಲಾಪೇನ ಹರೇ!ತವಾಗ್ರೇ ॥ ೪೯॥

ಎಲೈ ಆಶ್ರಿತರ ಪಾಪಹರಣ ಮಾಡುವವನೇ! ನನ್ನಪ್ರಲಾಪಗಳನ್ನು ಕೇಳುವುದಕ್ಕೆ ನಿನಿಗೆ(ಪ್ರಾಕೃತವಾದ)ಕಿವಿಗಳಿಲ್ಲವಲ್ಲಾ. ನನ್ನ ದುಃಖಗಳನ್ನು ನೋಡುವುದಕ್ಕೆ ನಿನಿಗೆ (ಪ್ರಾಕೃತವಾದ)ಕಣ್ಣುಗಳಿಲ್ಲವಲ್ಲಾ. ನನ್ನ ಬಂಧನವನ್ನು ಬಿಡಿಸುವುದಕ್ಕೆ ನಿನಗೆ (ಪ್ರಾಕೃತವಾದ) ಕೈಗಳಿಲ್ಲವಲ್ಲಾ. ನಿನ್ನಮುಂದೆ ನನ್ನ ಪ್ರಲಾಪದಿಂದ ಏನು ಪ್ರಯೋಜನವುಂಟು ॥೪೯॥

ಸೃಷ್ಟ್ವಾ ಹಿ ನಾಕನರಕಾ ಭವತಾ ಪ್ರಜಾಭ್ಯೋ
ದಾತುಂ ಫಲಾನಿ ಸುಕೃತೇಷ್ವಥ ದುಷ್ಕೃತೇಷು ।
ತಾ ಯಾಂತಿ ಕರ್ಮವಶತೋ ಯದಿ ತತ್ರ ತತ್ರ
ಕಿಂ ತೇ ವಿಭೋ! ಕರುಣಯಾ ಭುವಿ ಸಾಗಸಾಂ ನಃ ॥ ೫೦॥

ಎಲೈ ಪ್ರಭುವೆ! ಪ್ರಜೆಗಳಿಗೆಲ್ಲಾ ಪುಣ್ಯಪಾಪಗಳಫಲಗಳನ್ನು ಕೊ

ಡುವುದಕ್ಕಾಗಿ ಸ್ವರ್ಗನರಕಗಳು ನಿನ್ನಿಂದ ಸೃಷ್ಟಿಸಲ್ಪಟ್ಟಿವೆ. ಆಯಾ ಯಾಪ್ರಜೆಗಳು ಅವರವರ ಕರ್ಮಾನುಗುಣವಾಗಿ ಸ್ವರ್ಗನರಕಗಳಿಗೆ ಹೋಗುವುವುರಾದರೆ ಭೂಲೋಕದಲ್ಲಿ ಪಾಪಗಳೊಡನೆ ಕೂಡಿ ಇರುವ ನಮಗೆ ನಿನ್ನ ಕೃಪೆಯಿಂದ ಏನು ಪ್ರಯೋಜನ ಉಂಟು ? ॥೫೦॥

ಕೃಪಾ ಹಿ ಶಾಸ್ತ್ರೈ ಬಹುಶೋ ನಿರೂಪಿತಾ
ಪರಸ್ಯ ದುಃಖಾಸಹನಂ ವಿಚಕ್ಷಣೈಃ ।
ಸರ್ವಾತ್ಮಕಾತ್ತ್ವತ್ ಜಗದಸ್ತಿ ನಾನ್ಯತ್
ಕುತೋ ದಯಾಲೋಸ್ತವ ಸಾ ಭವೇನ್ಮಯಿ ॥ ೫೧॥

"ಇತರರ ದುಃಖವನ್ನು ಸಹಿಸದೆ ಇರುವಿಕೆಯೇ ದಯೆ" ಎಂದು ಶಾಸ್ತ್ರದಲ್ಲಿ ಪಂಡಿತರಾದವರಿಂದ ಅನೇಕ ಸ್ಥಳಗಳಲ್ಲಿ ನಿರೂಪಿಸಲ್ಪಟ್ಟಿದೆ. ಸರ್ವಜಗದಾತ್ಮಕನಾದ ನಿನಗಿಂತ ಜಗತ್ತು ಬೇರೆಯಾದದ್ದೇ ಅಲ್ಲವು, ಹೀಗಿರಲಾಗಿ ದಯಾಳುವಾದ ನಿನ್ನ ದಯೆಯು (ಜಗದಂತರ್ಗತನಾದ) ನನ್ನಲ್ಲಿ ಹೇಗೆ ಉಂಟಾದೀತು ? ॥೫೧॥

ಸರ್ವಂ ಜಗತ್ತೇ ವಪುರಿತ್ಯುದೀರ್ಣಂ
ತಚ್ಚಾಘನಾಕ್ರಾಂತಮಘೈರನಂತೈಃ ।
ತ್ವಂ ಯದ್ಯುದಾಸ್ಸೇತದಪೋಹನೇಽದ್ಯ
ವಿಲೀಯತೇ ಸೋಭಯಲಿಂಗತಾ ತೇ ॥ ೫೨॥

ಸರ್ವಜಗತ್ತೂ ನಿನಗೆ ಶರೀರವೆಂದು (ಶಾಸ್ತ್ರಗಳಲ್ಲಿ) ಹೇಳಲ್ಪಟ್ಟಿದೆ. ಆಜಗತ್ತು ಈಗ ಅನೇಕ ಪಾಪಗಳಿಂದ ಆಕ್ರಮಿಸಲ್ಪಟ್ಟಿದೆ. ಆಪಾಪಗಳನ್ನೂ ಹೋಗಲಾಡಿಸುವ ವಿಷಯದಲ್ಲಿ ನೀನು ಉದಾಸೀನನಾದರೆ ನಿನ್ನ ಉಭಯಲಿಂಗತ್ವವು (ಪಾಪಶೂನ್ಯನಾಗಿಯೂ ಪಾಪನಿವರ್ತಕನಾಗಿಯೂ ಇರುವಿಕೆಯು) ವಿಲೀನವಾಗಿಹೋಗುವುದು ॥೫೨॥

ಶ್ರುತಿಃ ಸ್ಮೃತಿಶ್ಚಾಧಿಗತಾ ತ್ವದಾಜ್ಞಾ
ತಾಭ್ಯಾಂ ಪ್ರತೀತಾ ಭವತಃ ಕೃಪಾಽಪಿ ।
ಯದಿ ತ್ವದೀಯೋಽಪ್ಯಭಿಭೂಯತೇಽಘೈಃ
ಹಾತಾ ತ್ವದಾಜ್ಞಾ ನ ತು ಮೇಽಸ್ತಿ ಹಾನಿಃ ॥ ೫೩॥

"ಶ್ರುತಿಯೂ ಸ್ಮೃತಿಯೂ ನಿನ್ನ ಆಜ್ಞೆ" ಎಂದುತಿಳಿಯಲ್ಪಟ್ಟದೆ ಆಶ್ರುತಿ ಸ್ಮೃತಿಗಳಿಂದಲೇ ನಿನಗೆ ಕೃಪೆಯುಉಂಟೆಂದು ತಿಳಿಯಲ್ಪಟ್ಟತು. ನಿನ್ನ ಕಡೆಯವರೂ ಪಾಪಗಳಿಂದ ತಿರಸ್ಕರಿಸಲ್ಪಡುವವರಾದರೆ ನಿನ್ನ ಆಜ್ಞೆಯೇ ಹೊಡೆಯಲ್ಪಟ್ಟತು. ನನಗೇನೂ ಹಾನಿಯಿಲ್ಲವು. ॥೫೩॥

ಹೃಷೀಕಾಣಾಂ ತ್ವಮೀಶೋಽಸಿ
ತಾನ್ಯೇವೇಶಾ ಮಮ ಪ್ರಭೋ! ।
ಹೃಷೀಕೇಶತ್ವತೌಲ್ಯೇಽಪಿ
ವಿಗ್ರಹೇ ವಿಗ್ರಹೋಽಸ್ತಿ ನೌ ॥ ೫೪॥

ಎಲೈ ಪ್ರಭುವೇ! ಇಂದ್ರಿಯಗಳಿಗೆಲ್ಲಾ ನೀನು ಈಶನಾಗಿದ್ದೀಯೆ ಆ ಇಂದ್ರಿಯಗಳೇ ನನಗೆ ಈಶಗಳಾಗಿವೆ. ಹೀಗೆ ನಿನಗೂ ನನಗೂ ಹೃಷೀಕೇಶತ್ವಸಮವಾಗಿದ್ದರೂ ವಿಗ್ರಹದಲ್ಲಿ (ಪದದ ಅರ್ಥಮಾಡುವಲ್ಲಿ) ನಮ್ಮಿಬ್ಬರಿಗೂ ವಿಗ್ರಹ (ಜಗಳ) ಉಂಟು ॥೫೪॥

ನಾನ್ತೋ ಹರೇಽಸ್ತಿ ತವ ಮಂಗಳಸದ್ಗುಣೌಘೇ
ನಾನ್ತೋಽಸ್ತಿ ದುಃಖನಿವಹೇಷು ಮಮಾಪಿ ಶೌರೇ! ।
ನಾನ್ತಸ್ತವಾಸ್ತಿ ಕರುಣಾಮೃತವಾರಿರಾಶೌ
ನಾನ್ತೋ ಮಮೈನಸಿ ಭವಾನಹಮಪ್ಯನನ್ತೌ ॥ ೫೫॥

ಎಲೈ ಹರಿಯೆ! ಮಂಗಳರೂಪವಾದ ಗುಣಗಣಗಳಲ್ಲಿ ನಿನಗೆ ಅಂತವಿಲ್ಲವು ದುಃಖಗಣಗಳಲ್ಲಿ ನನಗೂ ಅಂತವಿಲ್ಲವು. ಕೃಪೆ ಎಂಬ ಅಮೃತ ಸಮುದ್ರದಲ್ಲಿ ನಿನಗೆ ಅಂತವಿಲ್ಲವು ಪಾಪದಲ್ಲಿ ನನಿಗೂ ಅಂತವಿಲ್ಲವು ಹೀಗಾಗಲಾಗಿ ಎಲೈ ಶೌರಿಯೇ ನೀನೂ ನಾನೂ ( ಇಬ್ಬರೂ, ) ಅನಂತರೆ ಆಗಿದೇವೆ ॥೫೫॥

ಸ್ವಾಭಾವಿಕಂ ಹಿ ತವ ಮಂಗಲಭಾಜನತ್ವಂ
ದುಃಖಾಸ್ಪದತ್ವಮಪಿ ಮೇ ಸಹಜಂ ಮುರಾರೇ! ।
ಏವಂ ಸ್ಥಿತೇ ತವ ಮಮಾಪಿ ಭಿದಾವಿಶೇಷೇ
ಕೇನಾವಯೋರ್ಭವತಿ ಸಂಗತಿರೇಕದಾಽಪಿ ॥ ೫೬॥

ಎಲೈ ಮುರಾರಿಯೆ! ಮಂಗಳಾಶ್ರಯನಾಗಿರುವಿಕೆಯು ನಿನಿಗೆ ಸ್ವಾಭಾವಿಕವಾದುದು ದುಃಖಕ್ಕಾಶ್ರಯನಾಗಿರುವಿಕೆಯು ನನಿಗೆ ಸಹಜವಾದುದು. ಹೀಗೆ ನಿನಿಗೂ ನನಗೂ ದೊಡ್ಡ ಭೇದವಿರಲಾಗಿ ನಮ್ಮಿಬ್ಬರಿಗೂ ಒಂದಾವರ್ತಿಯಾದರೂ ಯಾವಕಾರಣದಿಂದ ಸಮಾಗಮವಾದೀತು ? ॥೫೬॥

ನೈವೇಂದ್ರಿಯಾಣಿ ಮಮ ಸನ್ತಿ ವಶಂವದಾನಿ
ಚಿತ್ತಂ ಪ್ರಕಾಮಚಪಲಂ ತಮಸಾ ವಿಮೂಢಮ್ ।
ದೇಹೋಽಪಿ ದುಃಖವಿವಶೋಽಚ್ಯುತ ಕಿಂ ಕರೋಮಿ
ಯಾನ್ ಕಾನ್ ಕರೋಮಿ ಪುರತಸ್ತವ ವಿಪ್ರಲಾಪಾನ್ ॥ ೫೭॥

ಎಲೈ ಆಶ್ರಿತರನ್ನು ಬಿಡದೆ ಇರುವುವನೆ! ನನಗಾಗಿಕೊಟ್ಟಿರುವ ಇಂದ್ರಿಯಗಳು ನನ್ನ ಅಧೀನದಲ್ಲಿ ಇರುವದಾಗಿ ಹೇಳುವದೂ ಸಹಇಲ್ಲವು ಸ್ವಭಾವದಿಂದ ಅತಿಚಂಚಲವಾದ ಮನಸ್ಸು ತಮೋಗುಣದಿಂದ ಮೂಢವಾಗಿದೆ ದೇಹವಾದರೊ ದುಃಖಾಧೀನವಾಗಿದೆ ಹೀಗಿರುವಾಗ ನಾನು ಏನು ಮಾಡಲಿ?ಯಾವಯಾವದೊ ವಿರುದ್ಧಪ್ರಲಾಪಗಳನ್ನೆಲ್ಲಾ ನಿನ್ನ ಮುಂದೆ ಮಾಡುವಂತೆ ಆಗುತ್ತದೆ. ॥೫೭॥

ಏತಾನಿ ಮಾಂ ಕಿಮಿತಿ ಭಾಷಯಸೇ ಪದಾನಿ
ಲೋಕಾವನೈಕನಿರತೋಽಪಿ ಕೃಪಾಂಬುರಾಶೇ! ।
ವಾಂಛಾ ಪರೀಕ್ಷಣವಿಧೌ ಮಮ ಚೇತಸಶ್ಚೇತ್
ವೇದ್ಯಂ ಕಿಮಸ್ತಿ ವಿದುಷಸ್ತವ ಮೂಢವಾಕ್ಯಾತ್ ॥ ೫೮॥

ಎಲೈ ಕೃಪಾ ಸಮುದ್ರನೆ! ಲೋಕಗಳನ್ನೆಲ್ಲಾ ರಕ್ಷಿಸಲು ಉದ್ಯುಕ್ತನಾಗಿದ್ದು ನೀನು ಪಿತಕ್ಕಾಗಿ ನನ್ನನ್ನು ಹೀಗೆ ಹೇಳುವಹಾಗೆ ಮಾಡುತ್ತಿ? ನನ್ನ ಮನಸ್ಸನ್ನು ಪರೀಕ್ಷಿಸಬೇಕೆಂಬ ಇಚ್ಛೆ ನಿನಗಿದೆಯೆ ಸರ್ವಜ್ಞನಾದ ನಿನಗೆ ಮೂರ್ಖನಾದ (ನನ್ನ) ಮಾತಿನಿಂದಾ ತಿಳಿಯಬೇಕಾದುದು ಯಾವದುಂಟು?

బధ్వాంజలిం సవినయం ప్రణిపత్య యాచే
శౌరే! కృపాకర! మయీహ కురు ప్రసాదమ్ ।
శ్రాంతోఽస్మి దుఃఖనివహైః స్సుచిరానుభూతైః
సందర్శయాస్య కరుణాం న తు దుఃఖలేశమ్ ॥ ೫೯॥

ಎಲೈ ಶೌರಿಯೆ! ಎಲೈ ಕೃಪಾಕರನೆ! ವಿನಯದೊಡನೆ ನಮಸ್ಕಾರ ಮಾಡಿ ಕೈಮುಗಿದು ನಿನ್ನನ್ನು ಬೇಡಿಕೊಳ್ಳುವೆನು. ನನ್ನಲ್ಲಿ ಈಗ ಅನುಗ್ರಹಮಾಡುವುವುನಾಗು. ಬಹುಕಾಲದಿಂದಲೂ ಅನುಭವಿಸಲ್ಪಟ್ಟ ದುಃಖಪರಂಪರೆಗಳಿಂದ ಸೋತುಹೋಗಿರುವೆನು. ಈಗ ಕೃಪೆಯನ್ನು ತೋರಿಸುವುವುನಾಗು ದುಃಖದ ಲೇಶಾಂಶವನ್ನೂ ತೋರಿಸಬೇಡವು. ॥೫೯॥

యావాంస్తు దుఃఖనివహోఽత్ర మయాఽనుభూతః
తావత్సుఖస్య న కణోఽపి చ మే ప్రదత్తా ।
సంకల్ప మేత మధునా పరివర్తయస్వ
మా యచ్ఛ దుఃఖ మణు దేహి సుఖం హ్యపారమ్॥ ೬೦॥

ಈವರಿವಿಗೆ ನನ್ನಿಂದ ಎಷ್ಟು ದುಃಖಪರಂಪರೆಯು ಅನುಭವಿಸಲ್ಪಟ್ಟಿತೋ ಅಷ್ಟು ಸುಖದಲ್ಲಿ ಬಿಂದುಕಣಮಾತ್ರವೂ ನನಗೆಕೊಡಲ್ಪಡಲಿಲ್ಲವು. ಈಗ ಈಸಂಕಲ್ಪವನ್ನು ಬದಲಾಯಿಸುವುವುನಾಗು. ಸ್ವಲ್ಪವೂ ದುಃಖವನ್ನುಕೊಡಬೇಡ. ಅಪರಿಮಿತವಾದ ಸುಖವನ್ನು ಕೊಡುವುವುನಾಗು. ॥೬೦॥

అజ్ఞాతనిగ్రహవిధిః కమలాఽస్తి తేఽగ్రే
కిం తేఽ మతా[illegible]ఏవ [illegible]చిత్తే ।
భీతోఽస్మ్య[illegible]ఽనుకమ్ప[illegible]
కిం న చ్ఛినత్సి మమ దుఃఖనిమిత్తమేనః ॥ ೬೧॥

ನಿಗ್ರಹವೆಂಬ ಕಾರ್ಯವೇ ತಿಳಿಯದೆ ಇರುವ ಲಕ್ಷ್ಮೀದೇವಿಯು ನಿನ್ನಮುಂದೆಯೇ ಇರುವುಳಷ್ಟು. ನಿನ್ನಮನಸ್ಸಿನಲ್ಲಿ ಪಶ್ಚಾತ್ತಾಪವೆಂಬುದೇ ಹುಟ್ಟುವುದಿಲ್ಲವೆ? ಅನನ್ಯಪ್ರಭುವಾದಾಗ್ಯೂ ನನ್ನ ಪಾಪದದೆಶೆಯಿಂದ ಹೆದರುವಿಯಾ, ನನ್ನ ದುಃಖಕ್ಕೆ ಕಾರಣವಾದ ಪಾಪವನ್ನು ಏತಕ್ಕೆ ಈಗಲೆ ನೀನು ಕತ್ತರಿಸುವುದಿಲ್ಲ ? ||೬೦||

ಕಿಂ ಮೇಽಸ್ತಿ ಕಾಲನಿಯಮೋಽಪ್ಯುತ ಜನ್ಮಸಂಖ್ಯಾ
ಮನ್ಯೇ ಕದಾಽಪಿ ನಹಿ ದುಃಖಗಣೇಷು ಸಂಖ್ಯಾ ।
ಶ್ರಾಂತಿರ್ಮಮಾಸ್ತ್ಯವಧಿರತ್ರ ತವೈವ ಕಿಂ ಸಾ
ಕಸ್ಮಾತ್ತ್ವರಾಂ ನ ಭಜಸೇ ಮಮ ರಕ್ಷಣೇಽದ್ಯ ॥ ೬೧||

ನನ್ನನ್ನು ರಕ್ಷಿಸಲು ಕಾಲವ್ಯವಸ್ಥೆ ಏನಾದರೂ ಉಂಟೆ? ಅಥವಾ ಇಷ್ಟುಜನ್ಮಗಳಾಗಬೇಕೆಂದು ಜನ್ಮದಲ್ಲಿ ಸಂಖ್ಯೆಉಂಟೆ? ದುಃಖಗಣಗಳಲ್ಲಿ ಯಾವಾಗಲೂ ಸಂಖ್ಯೆ ಇಲ್ಲ ಎಂಬುದನ್ನು ತಿಳಿದೇ ಇಥೇನೆ. ನಾನು ಸೋತುಹೋಗುವ ಕಾಲವೆ ಅವಧಿಯೆ ಅಥವಾ ನೀನು ದುಃಖಕೊಡುವುದರಲ್ಲಿ ಸೋಲುವವರಿವಿಗೂ ಕಾಯಬೇಕೆ ? ನೀನು ಏತಕ್ಕಾಗಿ ನನ್ನನ್ನು ಈಗಲೆ ರಕ್ಷಿಸಲು ತ್ವರೆಪಡುವುದಿಲ್ಲಾ. ||೬೨||

ರಕ್ಷಾವಿಧೌ ಮಮ ವಿಭೋ! ತವ ನಾಸ್ತ್ಯಶಕ್ತಿಃ
ನಾಪಾತ್ರಮಸ್ಮಿ ದುರಿತೈರಭಿಭೂಯಮಾನಃ ।
ನಾನ್ಯೋ ವಿಭುಸ್ತವ ಭವೇತ್ಖಲು ಶಾಸನಾಯ
ಕಸ್ಮಾದ್ವಿಲಂಬಮಧುನಾ ಕುರುಷೇ ದಯಾಲೋ! ॥ ೬೩||

ಎಲೈ ದಯಾಳುವಾದವನೆ, ನನ್ನನ್ನು ರಕ್ಷಿಸುವ ಕಾರ್ಯದಲ್ಲಿ ನಿನಿಗೆ ಅಶಕ್ತಿ ಇಲ್ಲವು ಪಾಪಗಳಿಂದ ತಿರಸ್ಕರಿಸಲ್ಪಡುತ್ತಿರುವ ನಾನು ಪಾತ್ರನಲ್ಲದೆಇಲ್ಲ ನಿನಿಗೆ ಆಜ್ಞೆಮಾಡಲು ಬೇರಪ್ರಭುಯಾರೂ ಇಲ್ಲ ಯಾವಕಾರಣದಿಂದಾ ಈಗ ವಿಲಂಬಮಾಡುತ್ತೀ.

ಹಾ ರೇ ಕೃಪಾಜಲನಿಧೇ ವಿಪದೇಕಬಂಧೋ
ಮಾಂ ಪಶ್ಯ ದುಃಖವಿವಶೈರಭಿಭೂಯಮಾನಮ್ ।
ಯಾವನ್ನ ರೋಗಮೃತ್ಯುಕಾ ವಿನಿಹನ್ತ್ಯರೇತೇ
ಮಾಂ ತಾವದೇವ ನೃಹರೇ ಕರುಣಾಂ ವಿಧೇಹಿ ॥ ೬೪||

ಎಲೈ ಶೌರಿಯೆ ! ಕೃಪಾಸಮುದ್ರನೇ ! ಆಪದ್ಬಂಧುವೆ! ದುಃಖಗಳ ಗುಂಪುಗಳಿಂದ ತಿರಸ್ಕರಿಸಲ್ಪಡುತ್ತಿರುವ ನನ್ನನ್ನು ನೋಡು, ತೋಳಗಳು ಹೆಣ್ಣುಜಿಂಕೆಯನ್ನು ಕೊಲ್ಲುವಂತೆ ಎಷ್ಟರಲ್ಲಿ ಈ ಪಾಪಗಳೆಲ್ಲಾ ನನ್ನನ್ನು ಪೀಡಿಸುವುದಿಲ್ಲವೋ ಅಷ್ಟರೊಳಗೆ ಎಲೈ ನರಸಿಂಹನೆ ! ಕೃಪೆಯನ್ನು ಮಾಡು ||೬೪||

ಸ್ವಾಮಿನ್! ಕೃಪಾಕರ! ವಿಭೋ! ಪುರುಷಪ್ರಕಾಂಡ!
ಸರ್ವಾತ್ಮಕೋಽಪಿ ಹಿ ಭವನ್ ಕಿಮುಪೇಕ್ಷಸೇ ಮಾಮ್ ।
ಭಕ್ತಾಸ್ತ್ವದೀಯತನವಃ ಕಥಿತಾಸ್ತ್ವಯೈವ
ಕಿಂ ನಾಸ್ತಿ ತೇ ಶುಗಪಿ ತೇಷು ಗತೇಷು ಶೋಕಮ್ ॥ ||೬೫||

ಎಲೈ ಸ್ವಾಮಿಯೆ ! ಕೃಪಾಕರನೆ! ಪ್ರಭುವೆ! ಪುರುಷೋತ್ತಮನೆ, ನೀನು ಸರ್ವಾತ್ಮಕನಾಗಿದ್ದು ಯಾತಕ್ಕಾಗಿ ನನ್ನನ್ನು ಉಪೇಕ್ಷಿಸುತ್ತೀ ಭಕ್ತರುಗಳೆಲ್ಲಾ ನಿನ್ನ ಶರೀರವೆಂದು ನಿನ್ನಿಂದಲೇ ಹೇಳಲ್ಪಟ್ಟಿದಾರಷ್ಟೆ, ಅವರು ದುಃಖವನ್ನು ಹೊಂದಿದರೆ ನಿನಗೆ ಶೋಕವಿಲ್ಲವೆ ? ||೬೫||

ಸರ್ವಜ್ಞತಾ ಸುವಿದಿತಾ ತವ ಶಾಸ್ತ್ರವರ್ಗೈಃ
ಜಾನಾಸಿ ಕಿಂ ಮಮ ನ ಘೋರ ಮನಸ್ತಮುಃಖಮ್ ।
ಉದ್ಘುಷ್ಯಸೇ ಶ್ರುತಿಗಣೈರ್ನನು ಸರ್ವಶಕ್ತಿಃ
ಶಕ್ತೋ ನ ಕಿಂ ದುರಿತನಾಶವಿಧೌ ಮಮಾದ್ಯ ॥ ||೬೬||

ಶಾಸ್ತ್ರಗಳಿಂದ ನಿನ್ನ ಸರ್ವಜ್ಞತೆ ತಿಳಿಯಲ್ಪಟ್ಟಿದೆ. ಆದರೂ ನನ್ನ ಕ್ರೂರವಾದ ದುಃಖವನ್ನು ತಿಳಿಯಲಾರೆಯಾ ? ವೇದಗಳ ಗುಂಪಿನಿಂದ ಸರ್ವಶಕ್ತಿಯೆಂದು ಹೊಗಳಿಸಿಕೊಳ್ಳುತ್ತೀಯೆ ನನ್ನ ಪಾಪಗಳನ್ನು ನಾಶಮಾಡುವದರಲ್ಲಿ ನೀನು ಶಕ್ತನಾಗಿಲ್ಲವೆ ||೬೬||

ಕೃಪಾವಿಶೇಷೈರವಸೀ ಖಿಲಾನ್ ಜನಾನ್
ತದಾಗಸಿ ಸ್ಯಾತ್ಕ್ಷಿತಿಕರ್ತೃ ತೇಽಜ್ಞತಾ।

ಮದೀಯದುಃಖೌಘವಿಲೋಕನೇಽಪಿ ಸಾ
ವಿಭೂಷಣಂ ಭೋಸ್ತವ ಕಿನ್ನು ಸಂಭವೇತ್ ॥ ॥೬೭॥

ಕೃಪಾಧಿಕ್ಯದಿಂದ ಎಲ್ಲರನ್ನೂ ರಕ್ಷಿಸುವ ನಿನಗೆ ಅವರಪಾಪಗಳಲ್ಲಿ ದೃಷ್ಟಿಯಿಡದೆ ಇರುವುದೆಂಬ ಅಜ್ಞತೆಯು ಒಂದು ಅಲಂಕಾರವಾದೀತು, ನನ್ನ ದುಃಖಗಳ ಪರಂಪರೆಯನ್ನು ನೋಡುವ ವಿಷಯದಲ್ಲಿಯೂ ನಿನಗೆ ಅಜ್ಞತೆಯು ಯಾವ ಅಲಂಕಾರವಾದೀತು ?॥೬೭॥

ತ್ವಂ ಕಿಂ ವಿನೋದವಿಧಯೇ ಭುವನಂ ತನೋಷಿ
ದುಃಖಂ ಸುಖಂ ಚ ಯಮಯನ್ ನಿಜಕರ್ಮಯೋಗಾತ್ ।
ಶೌರೇ! ವಿನೋದವಿಧಿನಾಽಲಮತೀವ ಖಿನ್ನೇ
ಮಯ್ಯಂಬುಜಾಕ್ಷ! ಕರುಣಾ ಮಧುನಾ ವಿಧೇಹಿ ॥ ॥೬೮॥

ಎಲೈ ಶೌರಿಯೆ ! ಈ ಪ್ರಪಂಚವನ್ನು ಅದರ ಕರ್ಮಾನುಸಾರವಾಗಿ ದುಃಖವನ್ನು ಸುಖವನ್ನೂ ವ್ಯವಸ್ಥೆಮಾಡುವವನಾಗಿ ನಿನ್ನವಿನೋದಕ್ಕೋಸ್ಕರವೆ ಮಾಡುತ್ತೀಯಾ ? ಆದರೆ, ಬಹಳ ಕಷ್ಟಪಟ್ಟಿರುವ ನನ್ನಲ್ಲಿ ಈ ವಿನೋದಕಾರ್ಯವನ್ನುಸಾಕುಮಾಡು. ಎಲೈ ಕಮಲಾಕ್ಷನೆ. ಈಗಲೇ ನನ್ನಲ್ಲಿ ಕೃಪೆಮಾಡು ॥೬೮॥

ಮುಗ್ಧಶ್ಶಿಶುರ್ನಿಪತಿತೋ ಯದಿ ಕೂಪಮಧ್ಯೇ
ಕೇನಾಽಪಿ ತತ್ರ ಚರತೋದ್ಧ್ರಿಯತೇಂಜಸಾಸಃ।
ಕಿಂ ಮಾಂ ಚಿರಾಯ ಪತಿತಂ ಭವಸಿಂಧುಮಧ್ಯೇ
ನೋದ್ಧರ್ತುಮಿಚ್ಛಸಿ ವಿಭೋ! ಕರುಣಾಕರೋಽಪಿ ॥ ॥೬೯॥

ಏನೂ ತಿಳಿಯದ ಒಂದು ಮಗುವು ಭಾವಿಯಮಧ್ಯದಲ್ಲಿ ಬಿದ್ದರೆ, ಅದು ಆ ಬಳಿ ಸಂಚರಿಸುವವನಿಂದ ಯಾವನಿಂದಲಾದರೂ ಶೀಘ್ರದಲ್ಲಿಯೆ ಎತ್ತಲ್ಪಡುತ್ತೆ, ಎಲೈ ಪ್ರಭುವೇ ! ನೀನು ಕೃಪಾಸಮುದ್ರನಾಗಿದ್ದು ಬಹಳಕಾಲದಿಂದಲೂ ಸಂಸಾರವೆಂಬ ಸಮುದ್ರದ ಮಧ್ಯದಲ್ಲಿ ಬಿದ್ದಿರುವ ನನ್ನನ್ನು ಎತ್ತಲುಏತಕ್ಕೆ ಅಪೇಕ್ಷಿಸುವುದಿಲ್ಲಾ? ॥೬೯॥

ಸಂಕಲ್ಪವಾನ್ ಯದಿ ವಿಭೋ! ಜಗದೀಶ್ವರ ಸ್ತ್ವಂ
ಪ್ರಕ್ಷೇಪ್ತುಮೇವ ಜಲಧೌ ವಿವಶಂ ಜನಂ ಮಾಮ್ ।
ಉದ್ಧೃತ್ಯ ದುಃಖಜಲಧೇ ರಮೃತಾಂಬುಧೌ ಮಾಂ
ತ್ವತ್ಪಾದಪಂಕಜಮರಂದಮಯೇ ನಿಧೇಹಿ ॥ ॥೭೦॥

ಎಲೈ ವಿಭುವೇ ! ಜಗದೀಶ್ವರನಾದ ನೀನು ನಿನ್ನ ಅಧೀನದಲ್ಲಿರುವ ನನ್ನನ್ನು ಸಮುದ್ರದಲ್ಲಿ ಹಾಕಲೇಬೇಕೆಂದು ಸಂಕಲ್ಪವುಳ್ಳವನಾಗಿದ್ದರೆ, ದುಃಖವೆಂಬ ಸಮುದ್ರದಿಂದ ನನ್ನನ್ನು ಎತ್ತಿ ನಿನ್ನ ಪಾದಕಮಲಗಳ ಮಕರಂದ ಮಯವಾದ ಅಮೃತ ಸಮುದ್ರದಲ್ಲಿ ಹಾಕು ॥೭೦॥

ಜ್ಞಾನಂ ಕ್ರಿಯಾ ಭಜನಮಿತ್ಯಖಿಲಾ ತ್ವಮೀನಾ
ಸೋಪಾನಪದ್ಧತಿರಿಯಂ ಭವತೈವಬದ್ಧಾ ।
ನಾರೋಢುಮೇಕಮಪಿ ಮೇಽಚ್ಯುತ!ಶಕ್ತಿಲೇಶಃ
ಸರ್ವೇಂದ್ರಿಯೈಸ್ತತಇತಃ ಪ್ರವಿಕೀರ್ಣಬುದ್ಧೇಃ ॥ ॥೭೧॥

ಭಕ್ತರನ್ನು ಬೀಳಿಸದೆ ಇರುವ ಎಲೈ ಅಚ್ಯುತನೆ [ಮಹೋನ್ನತನಾದ ನಿನ್ನನ್ನು ಹೊಂದಲು] ಎಲ್ಲಾ ಆತ್ಮಗಳಿಗೂ ಹಿತವಾದ ಕ್ರಿಯಾಯೋಗ ಜ್ಞಾನಯೋಗ ಭಕ್ತಿಯೋಗಗಳೆಂಬ ಮೆಟ್ಟಲುಗಳ ಮಾರ್ಗವು ನಿನ್ನಿಂದಲೇ ಕಟ್ಟಲ್ಪಟ್ಟಿದೆ. ಎಲ್ಲಾ ಇಂದ್ರಿಯಗಳಿಂದ ಆ ಈಕಡೆ ಎಳೆಯಲ್ಪಟ್ಟ ಬುದ್ಧಿಯುಳ್ಳ ನನಗೆ ಒಂದು ಮೆಟ್ಟಲನ್ನಾದರೂ ಹತ್ತುವುದಕ್ಕೆ ಶಕ್ತಿಯ ಲೇಶವೂ ಇಲ್ಲವು ॥೭೧॥

ತಪ್ತಂ ಮಯಾ ನಚ ತಪೋ ನ ಹುತೋಽಪಿ ಹೋಮಃ
ದತ್ತಂ ನ ದಾನಮಪಿ ನ ವ್ರತಮಾಚೀರ್ಣಮ್ ।
ಸ್ಮೃತ್ವಾ ತ್ವದುಕ್ತಿ ಮನಿಶಂ ಭವತೇಪಿ ಗೀತಾಂ
ಧರ್ಮಾನ್ವಿಹಾಯ ಶರಣಂ ನನು ಗಮ್ಯಸೇ ತ್ವಮ್ ॥ ॥೭೨॥

ತಪಸ್ಸು, ಹೋಮದಾನವ್ರತ ಇವುಗಳಲ್ಲಿ ಯಾವದೂ ನನ್ನಿಂದ ಮಾಡಲ್ಪಡಲಿಲ್ಲವು. ಎಲ್ಲಾ ಧರ್ಮಗಳನ್ನು ಬಿಟ್ಟ ನನ್ನನ್ನು ಶರಣವಾಗಿ

ಹೊಂದೆಂಬುದಾಗಿ ನಿನ್ನಿಂದ ಗೀತೆಯಲ್ಲಿ ಅನುಗ್ರಹಿಸಲ್ಪಟ್ಟಂತೆ ಎಲ್ಲಾ ಧರ್ಮಗಳನ್ನೂ ಬಿಟ್ಟು ನನ್ನಿಂದ ನೀನೆ ಶರಣವಾಗಿ ಹೊಂದಲ್ಪಟ್ಟಿದ್ದೀಯೆ ॥

నానావతారనివహై స్సుచిరానవాప్యం
స్వైరం చరన్తమపి స త్వ ముదీక్షసే మామ్ ।
శేషాచలే యదుగిరావథ హస్తిశైలే
శ్రీరంగధామ్ని చ వసన్ కిమిహాతనోషి ॥ ॥౭౩॥

ಸ್ವೇಚ್ಛೆಯಿಂದ ಸಂಚಾರಮಾಡುತ್ತಿದ್ದಾಗ್ಯೂ ಅನೇಕವಾದ ನಿನ್ನ ಅವತಾರಗಳಿಂದಲೂ, ಬಹುಕಾಲದಿಂದಲೂ, ಹೊಂದಲ್ಪಡಲಸಾಧ್ಯನಾದ ನನ್ನನ್ನು ನೀನು ನೋಡಲಾರೆ. ಶ್ರೀ ಶೇಷಾಚಲದಲ್ಲೂ ಶ್ರೀಯಾದವಾದ್ರಿಯಲ್ಲೂ ಶ್ರೀಹಸ್ತಿಶೈಲದಲ್ಲೂ ಶ್ರೀರಂಗದಲ್ಲೂ ವಾಸಮಾಡುತ್ತಾ, ಏನು ಮಾಡುತ್ತೀ ॥೭೩॥

త్వం పంచధాఽసి విదితో బహుధా తతోఽపి
వ్యూహః పరోఽర్చనవపు ర్విభవో న్తరాత్మా ।
రూపం తృతీయమిహ సర్వవిలోకనార్హం
కిం ఛాదయన్ మదధునాగిరి మాశ్రితోఽసి ॥ ॥౭౪॥

ನೀನು ಅನೇಕ ರೂಪವುಳ್ಳವನಾದಾಗ್ಯೂ ವ್ಯೂಹ, ಪರ, ಅರ್ಚಾ, ವಿಭವ, ಅಂತರಾತ್ಮಾ ಎಂದು ಐದು ರೂಪಗಳುಳ್ಳವನಾಗಿ ತಿಳಿಯಲ್ಪಟ್ಟಿದ್ದೀಯೆ. ಇವುಗಳಲ್ಲಿ ಮೂರನೆಯದಾದ ಅರ್ಚಾರೂಪವನ್ನು ಎಲ್ಲರ ಕಣ್ಣುಗಳಿಗೂ, ನೋಡುವದಕ್ಕೆ ಅರ್ಹವಾದ್ದನ್ನೂ ನನಗೆ ಕಾಣದಂತೆ ಮರೆಸುವವನಾಗಿ ಪರ್ವತವನ್ನು ಆಶ್ರಯಿಸಿರುತ್ತೀಯಾ ? ॥೭೪॥

శ్రాంతోఽసి కిం మమ కృతే భ్రమణై రిహాద్రౌ
తుంగం గిరిం కిమధిరుహ్య విలోకసేమామ్ ।
నూనం భవాగ్నిపతితం నను మాం ప్రసేక్తుం
దృష్ట్వా సుధాశిశిరయా గిరి మాశ్రితోఽసి ॥ ॥౭౫॥

ನನಗಾಗಿ ಸಂಚಾರಗಳಿಂದ ಪರ್ವತದಮೇಲೆ ಸೋತು ಹೋಗಿದ್ದೀಯಾ ? ಎತ್ತರವಾದ ಪರ್ವತವನ್ನು ಹತ್ತಿ ನನ್ನನ್ನು ನೋಡುವೆಯಾ? ಅದೂ ಅಲ್ಲ, ಸಂಸಾರವೆಂಬ ಬೆಂಕಿಯಲ್ಲಿ ಬಿದ್ದಿರುವ ನನ್ನನ್ನು ಅಮೃತಶೀತಲವಾದ ದೃಷ್ಟಿಯಿಂದಾ ನೆನೆಸಲು ಎತ್ತರವಾದ ಸ್ಥಲವನ್ನು ಆಶ್ರಯಿಸಿದ್ದೀ. ಇದೇ ನಿಶ್ಚಯವು ||೭೫||

దుర్వారఘోరతరసంసృతితాపతప్తం
మాం సించ దృష్టిసుధయా కరుణార్ద్రయా తే ।
సిక్తో యయా భువనభావన! దీనబంధో!
జీవామి సంశయలవోఽపి న మేఽస్తి శౌరే! ॥ ॥౭౬॥

ತಡೆಯಲಸಾಧ್ಯವಾದ ಮಹಾ ಕ್ರೂರವಾದ ಸಂಸಾರ ತಾಪದಿಂದ ಕಾಯಿಸಲ್ಪಟ್ಟಿರುವ ನನ್ನನ್ನು ಕೃಪೆಯಿಂದಾ ಶೀತಲವಾದ ನಿನ್ನ ದೃಷ್ಟ್ಯಮೃತದಿಂದಾ ನೆನೆಸು. ಯಾವಾಗಲೂ ಲೋಕವನ್ನೆಲ್ಲಾ ಚಿಂತಿಸುವವನೆ! ದೀನರಾದವರಿಗೆಲ್ಲಾ ಬಂಧುವೆ ! ಎಲೈ ಶೌರಿಯೆ ! ಯಾವ ದೃಷ್ಟ್ಯಮೃತದಿಂದ ನೆನೆಸಲ್ಪಟ್ಟವನಾಗಿ ನಾನು ಜೀವನವನ್ನು ಹೊಂದುವೆನು. ಸಂದೇಹದ ಲೇಶಾಂಶವೂ ಇಲ್ಲವು ||೭೬||

త్రాణాయ సాధునివహాస్య చ దుష్టహత్యై
సంస్థాపనాయ భువి ధర్మపథస్య విష్ణో! ।
నాభూ త్తవావతరణైరపి ఖేదలేశః
కో వా భవేత్తవ సకృన్మమదర్శనేఽపి॥ ॥౭౭॥

ಸತ್ಪುರುಷರನ್ನೆಲ್ಲಾ ರಕ್ಷಿಸುವುದಕ್ಕೂ ದುಷ್ಟರನ್ನು ನಾಶಗೊಳಿಸುವುದಕ್ಕೂ ಭೂಮಿಯಲ್ಲಿ ಧರ್ಮಮಾರ್ಗವನ್ನು ಸ್ಥಾಪನ ಮಾಡುವುದಕ್ಕೂ ಅನೇಕಾವತಾರಗಳಿಂದಲೂ ನಿನಗೆ ಕ್ಲೇಶದ ಲೇಶಾಂಶವೂ ಆಗಲಿಲ್ಲವಷ್ಟೆ, ಈಗ ನನ್ನನ್ನುಒಂದಾವರ್ತಿ ನೋಡುವುದರಲ್ಲಿ ಏನು ಶ್ರಮವಾದೀತು ? ||೭೭||

ನಾಲೋಕಸೇ ಕಿಮಿತಿ ಮಾಂ ಸರಸೀರುಹಾಕ್ಷ! ।
ತ್ವಂ ಕಥ್ಯಸೇ ಶ್ರುತಿಗಣೇಷು ಸಹಸ್ರನೇತ್ರಃ ।
ಕಿಂ ನ ಪ್ರಸಾರಯಸಿ ಮೂರ್ಧ್ನಿ ಮಮ ತ್ವದೀಯಂ
ಪಾದಂ ತ್ರಿವಿಕ್ರಮ! ಮತೋಽಸಿ ಸಹಸ್ರಪಾದಃ ॥ ॥೭೮॥

ಎಲೈ ಕಮಲದಂತೆ ಕಣ್ಣುಗಳುಳ್ಳವನೆ ! ಸಾವಿರ ಕಣ್ಣುಗಳುಳ್ಳವನೆಂದು ವೇದಗಳಲ್ಲಿ ಹೊಗಳಲ್ಪಡುವವನಾಗಿದ್ದೀಯಷ್ಟೆ. ಇಂಥಾ ನೀನು ನನ್ನನ್ನು ಯಾತಕ್ಕೆ ನೋಡುವುದಿಲ್ಲಾ. ಎಲೈ ತ್ರಿವಿಕ್ರಮನೆ! ಸಾವಿರಪಾದಗಳುಳ್ಳವನಾಗಿದ್ದೀಯಷ್ಟೆ, ನಿನ್ನ (ಒಂದು) ಕಾಲನ್ನು ನನ್ನತಲೆಯಮೇಲೆ ಯಾತಕ್ಕೆ ನೀಡುವುದಿಲ್ಲ?॥೭೮॥

ಸರ್ವಾವಲೋಕನಕೃತೇಽಸಿ ಸಹಸ್ರನೇತ್ರಃ
ಸರ್ವೋತ್ತಮಾಂಗಪತನಾಯ ಸಹಸ್ರಪಾದಃ ।
ಸಂಕಲ್ಪಲೇಶವಶತೋ ಭುವನಾನಿ ಬಿಭ್ರತ್
ಕಸ್ಮಾದ್ವಿಭಾಸಿ ಜಗದೀಶ! ಸಹಸ್ರಮೂರ್ಧಾ ॥ ॥೭೯॥

ಎಲೈ ಜಗದೀಶ್ವರನೆ ! ಎಲ್ಲರನ್ನೂ ನೋಡುವುದಕ್ಕಾಗಿ ಸಾವಿರ ಕಣ್ಣುಗಳುಳ್ಳವನಾಗಿದ್ದೀಯೆ, ಎಲ್ಲರ ತಲೆಯೂ ನಿನ್ನ ಕಾಲುಗಳಲ್ಲಿ ಬೀಳುವುದಕ್ಕಾಗಿ ಸಾವಿರ ಕಾಲುಗಳುಳ್ಳವನಾಗಿದ್ದೀಯೆ. ಸಂಕಲ್ಪ ಲೇಶಮಾತ್ರದಿಂದಲೇ ಲೋಕಗಳನ್ನೆಲ್ಲಾ ಧರಿಸುವ ನೀನು ಯಾತಕ್ಕಾಗಿ ಸಾವಿರತಲೆಗಳುಳ್ಳವನಾಗಿ ಪ್ರಕಾಶಿಸುವೆ?॥೭೯॥

ಶೇಷೋ ವಿಧಾತುಮಭಿವಾಂಛತಿ ಸರ್ವರೂಪಾಃ
ಸೇವಾಸ್ತವಾಖಿಲದಶಾಸು ಸಹಸ್ರಮೂರ್ಧಾ ।
ಪಶ್ಯೈತದೀಯಶಿರಸಾಂ ಸಮಸಂಖ್ಯಶೀರ್ಷಃ
ಆಸ್ವಾದಗಂ ತ್ವಮುರರೀಕುರುಷೇ ಪ್ರಹರ್ಷಾತ್ ॥ ॥೮೦॥

ಸಾವಿರ ತಲೆಗಳುಳ್ಳ ಆದಿಶೇಷನು ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಸರ್ವರೂಪವಾದ ನಿನ್ನ ಸೇವೆಗಳನ್ನು ಮಾಡಲು ಅಪೇಕ್ಷಿ

ಸುತ್ತಾನೆ. ಅವನು ಮಾಡುವ ಉಪಚಾರಗಳನ್ನು ಸಂತೋಷದಿಂದ ಅವನತ ಲೆಗಳ ಸಂಖ್ಯೆಗೆ ಸಮಸಂಖ್ಯೆ ಉಳ್ಳತಲೆಗಳುಳ್ಳವನಾಗಿ ಅಂಗೀಕರಿಸುತ್ತಿ ಎಂದು ನಾನು ತಿಳಿಯುತ್ತೇನೆ ॥೮೦॥

ಶ್ರಾಂತೋಽಸ್ಮ್ಯನಾರತಸುಘೋರಮಹಾಘಭೋಗೈಃ
ಸಂಪ್ರಾರ್ಥಯೇಽದ್ಯ ಬಹುಧಾ ಕರುಣಾಕರಂ ತ್ವಾಮ್ ।
ದುರ್ವಾರದುಃಖಶಮನೈಕಮಹೌಷಧಂ ತೇ
ಸಂದರ್ಶಯಾನನಸರೋಜಮಿಹೈವ ಮೇಽಕ್ಷ್ಣೋಃ ॥ ॥೮೧॥

ಯಾವಾಗಲೂ ಮಹಾ ಘೋರವಾದ ಪಾಪ ಫಲಗಳ ಅನುಭವದಿಂದ ಸೋತು ಹೋಗಿರುವೆನು. ಕೃಪಾಕರನಾದನಿನ್ನನ್ನು ಈಗ ಅನೇಕಧಾ ಪ್ರಾರ್ಥಿಸುತ್ತೇನೆ. ತಡೆಯಲಸಾಧ್ಯವಾದ ದುಃಖಗಳನ್ನೆಲ್ಲಾ ಶಮನಮಾಡುವುದರಲ್ಲಿ ಮುಖ್ಯೌಷಧವಾದ ನಿನ್ನ ಮುಖಕಮಲವನ್ನು ಇಲ್ಲಿಯೆ ನನ್ನ ಕಣ್ಣುಗಳಿಗೆ ತೋರಿಸುವವನಾಗು ॥೮೧॥

ಅಪಾದವಾನ್ ಧಾವಸಿ ಹಸ್ತಹೀನೋ
ಗೃಹ್ಣಾಸ್ಯನೇತ್ರೋಽಪ್ಯವಲೋಕಸೇ ಚ ।
ಅಕರ್ಣಯುಕ್ತಶ್ಚ ಶೃಣೋಷಿ ಶೌರೇ !
ಜಗಂತಿ ವಿಸ್ಮಾಪಯಿತುಂ ಸ್ವಕೃತ್ಯೈಃ ॥ ॥೮೨॥

ನಿನ್ನ ಕಾರ್ಯಗಳಿಂದಾ ಲೋಕವನ್ನು ಆಶ್ಚರ್ಯಪಡಿಸುವವನಾಗಿ (ಪ್ರಾಕೃತ) ಪಾದಗಳಿಲ್ಲದವನಾಗಿಯೆ ಓಡುತ್ತೀ, (ಪ್ರಾಕೃತವಾದ) ಕೈಗಳಿಲ್ಲದೆ ಹಿಡಿದುಕೊಳ್ಳುತ್ತೀ, (ಪ್ರಾಕೃತವಾದ)ಕಣ್ಣುಗಳಿಲ್ಲದೆ ನೋಡುತ್ತೀ, (ಪ್ರಾಕೃತವಾದ)ಕಿವಿಗಳಿಲ್ಲದವನಾಗಿಯೆ ಕೇಳುತ್ತೀ ॥೮೨॥

ನಾಸ್ಮಾಕಮುತ್ಪಾದಯತೀಹ ಚಿತ್ರಂ
ತೇ ಸರ್ವಶಕ್ತೇ ರ್ಭುವನಸ್ಯ ಸೃಷ್ಟಿಃ ।
ಏಕಾ ಕಿಲಾಸ್ಮಾನ್ವಿವಶೀಕರೋತಿ
ಸೌಲಭ್ಯಕಾಷ್ಠೈವ ಜಗದ್ವಿಭೋಸ್ತೇ ॥ ॥೮೩

ಸರ್ವಶಕ್ತನಾದನಿನ್ನ ವಿಚಿತ್ರವಾದಲೋಕನಿರ್ಮಾಣವು ನಮ್ಮಗಳಿಗೆ ಆಶ್ಚರ್ಯವನ್ನುಂಟು ಮಾಡುವುದಿಲ್ಲಾ. ಲೋಕಗಳಿಗೆಲ್ಲಾ ಪ್ರಭುವಾದ ನಿನ್ನ ಸೌಲಭ್ಯದ ಎಲ್ಲೆ ಬಂದೆ ನಮ್ಮನ್ನೆಲ್ಲಾ ಪರವಶರಾಗಿ ಮಾಡುತ್ತಿದೆ ||೧೩||

ಲಕ್ಷ್ಮೀಃ ಪ್ರಕಾಮಚಪಲಾಽಪಿ ವಿಶೇಷಕಾನ್ತಂ
ರೂಪಂ ವಿಲೋಕ್ಯ ತವ ಜಾತು ನ ಮುಂಚತಿ ತ್ವಾಮ್ ।
ತಸ್ಯಾಃ ಕಟಾಕ್ಷವಿಭವೈಕಫಲಂ ಪದಂ ತತ್
ಅಕ್ಲೇಶಲಬ್ಧಮವಧೀರ್ಯ ಭುವಂ ಗತೋಽಸಿ ॥ ||೧೪||

ಬಹಳ ಚಂಚಲಳಾದ ಲಕ್ಷ್ಮೀದೇವೀಸಹ ಅತ್ಯಂತ ಸುಂದರವಾದ ನಿನ್ನ ರೂಪವನ್ನು ನೋಡಿ ಯಾವಾಗಲೂ ನಿನ್ನನ್ನು ಬಿಡುವುದೆ ಇಲ್ಲ. ಅವಳ ಕಟಾಕ್ಷ ಬಲದಿಂದ ಮಾತ್ರವೆ ನಿನಗೆ ಅಕ್ಲೇಶವಾಗಿ ಬಂದಿರುವ ಅಂಥಾ ಪರಮಪದವನ್ನೂ ಸಹ ಬಿಟ್ಟು ಈ ಭೂಮಿಗೆ [ನಮ್ಮನ್ನು ರಕ್ಷಿಸಲು] ಬಂದಿದ್ದೀಯಷ್ಟೆ ||೧೪||

ಅತ್ರಾಗತೋಽಸಿ ಜಗದೀಶ್ವರ! ಮಾಂ ವಿಚಿಂತ್ಯ
ದುಃಖೈಃ ಪ್ರಪೀಡಿತಮಪಾರಕೃಪಾಂಬುರಾಶಿಃ ।
ನೋಚೇದನುತ್ತಮಸುಖೈಕಪದೇ ಪ್ರದೇಶೇ
ಲಕ್ಷ್ಮ್ಯಾ ಸಮಂ ವಿಹರತಸ್ತವ ಕಾ ಸ್ಪೃಹಾಽತ್ರ ॥ ||೧೫||

ಎಲೈ ಜಗದೀಶ್ವರನೆ! ಎಲ್ಲೆಯಿಲ್ಲದ ಕೃಪಾಸಮುದ್ರನಾದ ನೀನು ದುಃಖಗಳಿಂದ ವಿಶೇಷ ಪೀಡಿತನಾದ ನನ್ನನ್ನು ಚಿಂತಿಸಿ ಈ ಭೂಲೋಕಕ್ಕೆ ಬಂದಿದ್ದೀಯೆ, ಹಾಗಲ್ಲದಿದ್ದರೆ ಅತ್ಯುತ್ತಮವಾದ ಸುಖಕ್ಕೇನೇ ಸ್ಥಾನವಾದ ಪ್ರದೇಶದಲ್ಲಿ ಲಕ್ಷ್ಮೀಸಂಗಡ ವಿಹರಿಸುತ್ತಿರುವ ನಿನಗೆ ಇಲ್ಲಿ ಯಾವ ಆಶೆಯುಂಟು?||೧೫||

ಅಪ್ರಾಕೃತಾಂ ಮಂಗಲಮೂರ್ತಿಮೇವ
ಸರ್ವಾಕ್ಷಿಪಾತ್ರಂ ದಯಯಾ ಕರೋಷಿ ।

ತಯೈವ ಮೂರ್ತ್ಯಾಚ್ಯುತ ಸರ್ವಶಕ್ತೇ!
ತಾಪಂ ಮದಕ್ಷ್ಣೋ ರ್ನ ವಿನಾಶಯೇಃ ಕಿಮ್ ॥ ॥೮೬॥

ಅಪ್ರಾಕೃತವಾದ ನಿನ್ನ ದಿವ್ಯಮಂಗಳ ವಿಗ್ರಹವನ್ನು ಎಲ್ಲಾ ಜನಗಳ ಕಣ್ಣಿಗೂ ತಿಳಿಯುವ ಹಾಗೆ ದಯೆಯಿಂದ ಮಾಡುತ್ತೀಯಷ್ಟೆ. ಅದೇ ಮೂರ್ತಿಯಿಂದಲೆ ನನ್ನ ಕಣ್ಣುಗಳ ತಾಪವನ್ನೂ ಕೂಡಾ ಯಾತಕ್ಕಾಗಿ ನೀನು ನಾಶಮಾಡದೆ ಇದ್ದಿ ॥೮೬॥

ಸರ್ವೇ ವೇದಾ ಯಾಂ ಸದಾ ಸಂಸ್ತುವೀರನ್
ಯಸ್ಯೈ ಲಕ್ಷ್ಮೀ ಸ್ಸ್ವಾಂ ಸ್ಪೃಹಾಂ ವಿಸ್ತೃಣೀತೇ ।
ಯಸ್ಯಾ ದೃಷ್ಟ್ಯಾ ಸರ್ವಕರ್ಮಕ್ಷಯ ಸ್ಸ್ಯಾತ್
ತಾಂ ತೇ ಮೂರ್ತಿಂ ದರ್ಶಯಾಗ್ರೇ ಮದಕ್ಷ್ಣೋಃ ॥ ॥೮೭॥

ಯಾವ ನಿನ್ನ ಮೂರ್ತಿಯನ್ನು ಎಲ್ಲಾ ವೇದಗಳೂ ಯಾವಾಗಲೂ ಸ್ತೋತ್ರಮಾಡುವುವೋ, ಯಾವಶರೀರಕ್ಕಾಗಿ ಲಕ್ಷ್ಮೀದೇವಿಯೂ ತನ್ನ ಆಶೆಯನ್ನು ಹೆಚ್ಚು ಮಾಡುತ್ತಾಳೋ, ಯಾವ ಮೂರ್ತಿಯ ದರ್ಶನವಾದ ಮಾತ್ರಕ್ಕೆ ಸಕಲ ಕರ್ಮವೂ ಕ್ಷಯಿಸುವುದೋ, ಅಂಥಾ ನಿನ್ನ ದಿವ್ಯಮೂರ್ತಿಯನ್ನು ನನ್ನ ಕಣ್ಣುಗಳ ಎದುರಿಗೆ ತೋರಿಸುವನಾಗು ॥೮೭॥

ಭೂಪಾತ್ಮಜಸ್ಯ ಭವತಃ ಕಪಿಸಖ್ಯವಾಂಛಾ
ಸರ್ವಪ್ರದಸ್ಯ ಶಬರೀಕರತಃ ಫಲಾಪ್ತಿಃ ।
ಕೀಶೇನ ಸೇತುರಚನಾಂಬುನಿಧೌ ವಿಭೋಸ್ತೇ
ಲೀಲಾ ನು ಕಿಂ ರಘುಪತೇ! ತದನುಗ್ರಹೋ ವಾ ॥ ॥೮೮॥

ಸಾರ್ವಭೌಮನ ಮಗನಾದ ನಿನಿಗೆ ಕಪಿಯ ಸ್ನೇಹವನ್ನು ಅಪೇಕ್ಷಿಸುವುದೂ, ಸಕಲವನ್ನೂ ಕೊಡುವ ನಿನಿಗೆ ಶಬರಿಯ ಕೈಯಿಂದ ಹಣ್ಣು ತೆಗೆದುಕೊಳ್ಳುವುದೂ, ಪ್ರಭುವಾದ ನಿನಿಗೆ ಕಪಿಯಿಂದ ಸಮುದ್ರದಲ್ಲಿ ಸೇತು ಕಟ್ಟಿಸಿಕೊಳ್ಳುವಿಕೆಯೂ ಇವೆಲ್ಲಾ ನಿನಿಗೆ ಲೀಲೆಯೆ, ಅಥವಾ ಅವರವರನ್ನೂ ಅನುಗ್ರಹಿಸುವುದೆ? ॥೮೮॥

ಸೇವಾವಿಧೌ ಮೃಗಯಸೆ ಯದಿ ಕಂಚನ ತ್ವಂ
ಮಾಮೇವ ಕಿಂ ನ ವೃಣುಷೇ ತವ ಸೇವನಾಯ ।
ತ್ವನ್ನೇತ್ರಸಾರಸ ಸುಧಾಪ್ಲುತಸರ್ವಗಾತ್ರಂ
ತ್ವತ್ಪಾದಪಂಕಜಮರಂದರಸೈಕವೃತ್ತಿಮ್ ॥ ॥೮೯॥

ನಿನ್ನನ್ನು ಸೇವಿಸುವದಕ್ಕಾಗಿ ನೀನು ಯಾರನ್ನೊ ಹುಡುಕುತ್ತಿಯು ಷ್ಟೆ. ನನ್ನನ್ನೇ ನಿನ್ನ ಕಣ್ಣುಗಳೆಂಬ ಕಮಲಗಳ ಅಮೃತ ರಸದಿಂದ ಸ್ನಾನಮಾಡಿದವನನ್ನಾಗಿಯೂ ನಿನ್ನ ಪಾದಕಮಲಗಳ ಮಕರಂದವೆ ಜೀವನವನ್ನಾಗಿಯೂ ಮಾಡಿ ನನ್ನನ್ನೇ ಯಾತಕ್ಕೆ ನೀನು ವರಿಸಬಾರದು. ॥೮೯॥

ವಾಂಛಾಸ್ತಿ ಚೇನ್ಮಮ ಸಮುದ್ಧರಣೇ ಪ್ರಭೋ ತೇ
ತಾಂ ಮೇ ವದಾತ್ಮವಚಸಾ ಶ್ರವಣಾಮೃತೇನ ।
ಸಂದರ್ಶ್ಯ ತೇ ವಿಮಲ ಶಾರದ ಚಂದ್ರಕಾಂತಂ
ವಕ್ತ್ರಂ ಪ್ರಫುಲ್ಲ ಸರಸೀರುಹ ಪತ್ರನೇತ್ರಮ್ ॥ ॥೯೦॥

ಎಲೈ ಪ್ರಭುವೆ ! ನಿನಿಗೆ ನನ್ನನ್ನು ಉದ್ಧಾರಮಾಡಬೇಕೆಂಬ ಅಪೇಕ್ಷೆ ಇದ್ದರೆ, ನಿರ್ಮಲವಾದ ಶರತ್ಕಾಲದ ಚಂದ್ರನಂತೆ ಸುಂದರವಾಗಿಯೂ, ಚನ್ನಾಗಿ ಅರಳಿರುವ ಕಮಲದ ದಳಗಳಂತೆ ಕಣ್ಣುಗಳೂ ಉಳ್ಳ ನಿನ್ನ ಮುಖವನ್ನು ನನಗೆ ತೋರಿಸಿ, ನನ್ನ ಕಿವಿಗಳಿಗೆ ಅಮೃತ ಪ್ರಾಯವಾದ ನಿನ್ನ ವಾಕ್ಕಿನಿಂದ ನಿನ್ನ ಇಷ್ಟವನ್ನು ನನಗೆ ಹೇಳುವನಾಗು ॥೯೦॥

ಪೀತಾಂಬರಂ ಮರಕತಾಭ ಸುಕೋಮಲಾಂಗಂ
ವರ್ಷೋನ್ಮುಖಾಸಿತವಲಾಹಕ ಸೌಮ್ಯಕಾಂತಿಮ್ ।
ಶ್ರೀವತ್ಸಕೌಸ್ತುಭರಮಾಂಚಿತವಕ್ಷಸಂ ತ್ವಾಂ
ನೇತ್ರದ್ವಯಂ ಮಮ ಪಿಪಾಸತಿ ತಾಪಶಾಂತ್ಯೈ ॥ ॥೯೧॥

ಸ್ವರ್ಣಚ್ಛಾಯೆಯುಳ್ಳ ದಿವ್ಯವಸ್ತ್ರವುಳ್ಳವನಾಗಿಯೂ, ಪಚ್ಚೆರತ್ನದಂತೆಯೂ, ಸುಕುಮಾರನಾಗಿಯೂ, ಮಳೆ ಸುರಿಯುವ ಸಮಯದಲ್ಲಿರುವ ಕಪ್ಪಾದ ಮೇಘದಂತೆ ಸೌಮ್ಯವಾದ ಕಾಂತಿಯುಳ್ಳವನಾಗಿಯೂ, ಶ್ರೀ

ವತ್ಸಚಿಹ್ನ ಕೌಸ್ತುಭ ರತ್ನ ಮಹಾಲಕ್ಷ್ಮೀ ಇವರುಗಳಿಂದ ಗುರುತುಮಾಡಲ್ಪಟ್ಟ ದಿವ್ಯವಕ್ಷಸ್ಥಲ ಉಳ್ಳವನಾಗಿಯೂ ಇರುವ ನಿನ್ನನ್ನು ನನ್ನ ಎರಡು ಕಣ್ಣುಗಳೂ ತಾಪಶಾಂತಿ ಗೋಸ್ಕರ ಪಾನಮಾಡಲಪೇಕ್ಷಿಸುತ್ತಿವೆ ॥೯೦॥

ಉತ್ತಪ್ತಹೇಮಮಯಮಂಗಲದಿವ್ಯಮೂರ್ತೇ!
ನಿರ್ಮೃಷ್ಟಲಾಂಛನ ಸುಧಾಕರ ಕಾನ್ತವಕ್ತ್ರ! ।
ಸದ್ಯೋವಿಕಾಸಿ ನವಶಾರದ ಪಂಕಜಾಕ್ಷ!
ತ್ವಂ ಮೇ ಕದಾ ನಯನಗೋಚರ ಮೇಷ್ಯಸೀಶ! ॥ ॥೯೨॥

ಚನ್ನಾಗಿ ಕಾಯಿಸಲ್ಪಟ್ಟ ಸುವರ್ಣರೂಪವಾದ ದಿವ್ಯಮಂಗಳ ವಿಗ್ರಹಉಳ್ಳವನೆ, ಕಳಂಕವನ್ನೆಲ್ಲಾ ತೊಳೆಯಲ್ಪಟ್ಟ ಚಂದ್ರನಂತೆ ಸುಂದರವಾದ ಮುಖವುಳ್ಳವನೆ, ಆಗತಾನೆ ಅರಳುತ್ತಿರುವ ಹೊಸದಾದ ಶರತ್ಕಾಲದ ಕಮಲದಂತೆ ಕಣ್ಣುಗಳುಳ್ಳವನೆ, ಎಲೈ ಸರ್ವೇಶ್ವರನೆ, ನೀನು ಯಾವಾಗ ನನ್ನ ಕಣ್ಣುಗಳಿಗೆ ತಿಳಿಯುವನಾಗುತ್ತೀ ॥೯೨॥

ಪ್ರತಪ್ತಕಾರ್ತಸ್ವರ ಭಾಸ್ವರಾಂಗಂ
ಉನ್ಮೀಲದಂಭೋರುಹ ಪತ್ರನೇತ್ರಮ್ ।
ವಿದ್ಯುಲ್ಲತಾ ಛೇಂದಿರಯಾ ಯುತಂ ತ್ವಾಂ
ಕದಾ ನು ಮೇ ದ್ರಕ್ಷ್ಯತಿ ನೇತ್ರಯುಗ್ಮಮ್ ॥ ॥೯೩॥

ಕಾಯಿಸಲ್ಪಟ್ಟ ಸುವರ್ಣದಂತೆ ಪ್ರಕಾಶಮಾನವಾದ ಅವಯವಗಳುಳ್ಳವನಾಗಿಯೂ, ವಿಕಸಿಸುತ್ತಿರುವ ಕಮಲದ ದಳದಂತೆ ಕಣ್ಣುಗಳುಳ್ಳವನಾಗಿಯೂ, ಮಿಂಚಿನಂತೆ ಪ್ರಕಾಶಮಾನಳಾದ ಲಕ್ಷ್ಮೀಸಮಾಲಿಂಗಿತನಾಗಿಯೂ ಇರುವ ನಿನ್ನನ್ನು ಯಾವಾಗ ನನ್ನ ಎರಡು ಕಣ್ಣುಗಳು ನೋಡುವುವು? ॥೯೩॥

ವಾಚಂ ಸುಧಾಸಮುಚಂ ಕುರು ಕರ್ಣಯೋರ್ಮೇ
ಶೌರೇ ಕದಾ ನು ಭಗವನ್ಮಮ ಕರ್ಣಯೋಸ್ತ್ವಮ್ ।

ಮಂದಸ್ಮಿತಂ ರುಚಿರಕುಂತಲ ಮಾನನಂ ತೇ
ಸದ್ಯಃ ಪ್ರಫುಲ್ಲಸರಸೀರುಹ ಚಾರುನೇತ್ರಮ್ ॥ ॥೬೪॥

ಎಲೈ ಶೌರಿಯೆ ! ಎಲೈ ಭಗವಂತನೆ! ನನ್ನ ಕಿವಿಯಲ್ಲಿ ಒಂದು ಮಾತನ್ನಾದರೂ ಆಡು. ಮುಗುಳ್ನಗೆ ಉಳ್ಳದ್ದಾಗಿಯೂ, ಪ್ರಕಾಶಮಾನವಾದ ಮುಂಗುರುಳುಗಳುಳ್ಳದ್ದಾಗಿಯೂ, ಆಗತಾನೆ ವಿಕಾಸವಾಗುವ ಕಮಲದಂತೆ ಸುಂದರವಾದ ಕಣ್ಣುಗಳುಳ್ಳದ್ದಾಗಿಯೂ ಇರುವ ನಿನ್ನ ಮುಖವನ್ನು ಯಾವಾಗ ನನಗೆ ತೋರಿಸುವನಾಗುವೆ. ॥೯೪॥

ವಾಚಾ ಕದಾ ಮಧುರಯಾ ಪರಿಸಾಂತ್ವಯೇ ರ್ಮಾಂ
ಭೋ ವತ್ಸ ಮಾ ರುದಿಹಿ ತೇ ಸ್ತಿ ಭಯಂ ನ ಕಿಂಚಿತ್ ॥
ಪಾಪಂ ತ್ವದೀಯ ಮಖಿಲಂ ವಿನಿಹನ್ಮಿ ತೂರ್ಣಂ
ಸಂಪ್ರಾಪಯಾಮಿ ವಿಪುಲಾನಿ ಸುಖಾನಿ ಚೇತಿ ॥ ॥೬೫॥

'ಎಲೈ ಮಗುವೆ ! ನೀನು ಅಳಬೇಡ, ನಿನಿಗೇನೂ ಭಯವಿಲ್ಲವು ನಿನ್ನ ಪಾಪವನ್ನೆಲ್ಲಾ ನಾಶಗೊಳಿಸುವೆನು. ಶೀಘ್ರದಲ್ಲಿಯೆ ಅಪರಿಮಿತವಾದ ಸುಖಗಳನ್ನು ಕೊಡುವೆನು' ಎಂದು ಮಧುರವಾದ ನಿನ್ನ ಮಾತಿನಿಂದ ಯಾವಾಗ ನನ್ನನ್ನು ಸಮಾಧಾನ ಪಡಿಸುವೆಯೊ ॥೯೫॥

ಭಾರ್ಯಾ ಪುತ್ರಾ ಬಾಂಧವಾಃ ಕ್ಷೇತ್ರಗೇಹೇ
ವಿದ್ಯಾ ರೋಗ್ಯಂ ವೈಭವಂ ದೀರ್ಘಮಾಯುಃ ।
ಸರ್ವಾಣ್ಯೇತಾನ್ಯತ್ರ ಸಂಪ್ರಾರ್ಥಯೇಹಂ
ಸರ್ವಾತ್ಮಾನಂ ತ್ವರ್ಚಿತುಂ ತ್ವಾಂ ರಮೇಶಮ್ ॥ ॥೬೬॥

ಎಲೈ ದೇವನೆ ! ಸರ್ವಾತ್ಮಕನಾಗಿಯೂ ಲಕ್ಷ್ಮೀಪತಿಯಾಗಿಯೂ ಇರುವ ನಿನ್ನನ್ನು ಆರಾಧಿಸುವದಕ್ಕಾಗಿಯೆ ಇಲ್ಲಿ ಹೆಂಡತಿ,ಪುತ್ರರು, ಬಂಧುಗಳು, ಭೂಮಿ, ಮನೆ, ವಿದ್ಯೆ, ಆರೋಗ್ಯ, ಐಶ್ವರ್ಯ, ದೀರ್ಘವಾದ ಆಯುಸ್ಸು ಇವುಗಳನ್ನೆಲ್ಲಾ ಪ್ರಾರ್ಥಿಸುವೆನು ॥೯೬॥

ಅತ್ರ ಬ್ರಹ್ಮಸಮಶ್ನುತೇ ತವಕೃಪಾಪೀಯೂಷಸ್ನಾತೋ
ಮಾನವಃ ಕಿಂವಾ ಸರ್ವವಿಭೋ ತ್ವಯಾ ಪ್ಯಸುಕರಂ ಸ್ರಷ್ಟಾ
ರ್ಧಿಯೈವಾಖಿಲಮ್ । ತಸ್ಮಾದತ್ರ ವಿಧೇಯ ಮಾಂ ಪ್ರತಿಕಲಂ
ತ್ವತ್ಪಾದ ಪಂಕೇರುಹದ್ವಂದ್ವಧ್ಯಾನಸುಧಾರಸೌಘ
ಕಲನಾಮಾತ್ರಪ್ರಹೃಷ್ಟಂ ಸದಾ ॥ ॥೯೭॥

ಎಲೈ ಸರ್ವೇಶ್ವರನೆ ! ನಿನ್ನ ಕೃಪಾಮೃತದಿಂದ ಸ್ನಾನಮಾಡಿಸ ಲ್ಪಟ್ಟ ಮನುಷ್ಯನು ಈ ಲೋಕದಲ್ಲಿಯೆ ಬ್ರಹ್ಮಾನುಭವ ರೂಪವಾದ ಪರಮಾನಂದವನ್ನು ಹೊಂದಲು ಯೋಗ್ಯನಾಗುವನು. ಸಂಕಲ್ಪ ಮಾತ್ರ ದಿಂದಲೇ ಎಲ್ಲವನ್ನೂ ಸೃಷ್ಟಿಸುವ ನಿನ್ನಿಂದಲೂ ಮಾಡಲಸಾಧ್ಯವಾದದ್ದು ಯಾವದುಂಟು, ಆದುದರಿಂದ ನನ್ನನ್ನು ಈ ಲೋಕದಲ್ಲಿರುವಾಗಲೂ, ಪ್ರತಿಕ್ಷಣವೂ ನಿನ್ನ ಪಾದಕಮಲಗಳ ಜೋಡಿಗಳ ಧ್ಯಾನ ರೂಪವಾದ ಅ ಮೃತರಸ ಪ್ರವಾಹದಲ್ಲಿ ಪರಿಚಯಮಾತ್ರದಿಂದಲೆ ಸಂತುಷ್ಟನಾಗಿರುವಂತೆ ಸರ್ವದಾ ನೀನು ಮಾಡುವನಾಗು ॥೯೭॥

ಶ್ರೀಮತ್ಸ್ಯಕೂರ್ಮಕಿಟಿಪೂರುಷ ಸಿಂಹಖರ್ವ
ಭೃಗ್ವಾತ್ಮಸಂಭವ ರಘೂದ್ವಹಗೋಪಮುಖ್ಯೈಃ ।
ರೂಪೈರ್ಜಲಸ್ಥಲವಿಹಾರಚಣೈರನಂತೈಃ
ಲೋಕತ್ರಯಾವನರತಶ್ಶರಣಂ ಹರಿರ್ನಃ ॥ ॥೯೮॥

ಜಲ, ಸ್ಥಳಗಳಲ್ಲೆಲ್ಲಾ ಸಂಚಾರಕ್ಕೆ ಯೋಗ್ಯವಾದ ಶ್ರೀ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ಶ್ರೀ ರಾಮ, ಶ್ರೀ ಕೃಷ್ಣ, ಇವೆ ಮೊದಲಾದ ಅನಂತರೂಪಗಳಿಂದ ಎಲ್ಲಾ ಲೋ ಕಗಳನ್ನೂ ರಕ್ಷಿಸಲು ಯಾವಾಗಲೂ, ಪ್ರೀತಿಯುಳ್ಳ ಶ್ರೀ ಹರಿಯು ನ ಮ್ಮೆಲ್ಲರಿಗೂ ಪ್ರಾಪ್ಯನಾಗಿರುವನು ॥೯೮॥

ವೇದಾನುದ್ಧೃತ್ಯ ಸಕಲಾನ್ ದತ್ವಾ ಧಾತ್ರೇ ಯಥಾಪುರಮ್ ।
ಜಗಂತಿ ಸೃಜತೇ ತೇನ ಮತ್ಸ್ಯರೂಪಾಯ ಮಂಗಲಮ್॥ ॥೯೯॥

ವೇದಗಳನ್ನೆಲ್ಲಾ ಅಪಹರಿಸಿಕೊಂಡು ಸಮುದ್ರದೊಳಗೆ ಪ್ರವೇಶ ಮಾಡಿದ್ದ ಅಸುರನನ್ನುಸಂಹರಿಸಿ ವೇದಗಳನ್ನೆಲ್ಲಾ ಉದ್ಧಾರಮಾಡಿ ಬ್ರಹ್ಮನಿಗೆ ಕೊಟ್ಟು ಪೂರ್ವದಂತೆಯೆ ಅವನಿಂದ ಜಗತ್ತನ್ನು ಸೃಷ್ಟಿಸುವ ಶ್ರೀಮತ್ಸ್ಯ ಮೂರ್ತಿಗೆ ಮಂಗಳವು ॥೯೯॥

ದೇವಾನಾಂ ಹೃತರಾಜ್ಯಾನಾ ಮವನಾಯ
ಸುಧಾಂಬುಧೌ । ಅಮೃತೋತ್ಪಾದ
ಬೀಜಾಯ ಕೂರ್ಮರೂಪಾಯ ಮಂಗಲಮ್ ॥ ॥೧೦೦॥

ದೂರ್ವಾಸ ಋಷಿಯು ಶಾಪದಿಂದ ಶಕ್ತಿ ವಿಹೀನರಾಗಿ ಅಪಹರಿಸಲ್ಪಟ್ಟ ರಾಜ್ಯವುಳ್ಳ ದೇವತೆಗಳ ರಕ್ಷಣಕ್ಕಾಗಿ ಕ್ಷೀರಾಬ್ಧಿಯಲ್ಲಿ ಅಮೃತವನ್ನು ಎತ್ತುವದಕ್ಕೆ ಕಾರಣಭೂತನಾದ ಶ್ರೀ ಕೂರ್ಮ ಮೂರ್ತಿಗೆ ಮಂಗಳವು ॥೧೦೦॥

ಅಸುರಾಪಹೃತಾಂ ದೀನಾಂ ಮಗ್ನಾಂ ಪಂಕೇ ಸುದುಸ್ತರೇ ।
ದಂಷ್ಟ್ರಯೋದ್ಧರತೇ ಧಾತ್ರೀಂ ಕೋಲರೂಪಾಯ ಮಂಗಲಮ್ ॥೧೦೧॥

ಹಿರಣ್ಯಾಕ್ಷನೆಂಬ ಅಸುರನಿಂದ ಅಪಹರಿಸಲ್ಪಟ್ಟು ಬಹಳ ಕಷ್ಟದಿಂದ ಸಮುದ್ರದಲ್ಲಿ ಮುಳುಗಿ ಹೋಗಿದ್ದ ಭೂದೇವಿಯನ್ನು ಕೋರೆಹಲ್ಲಿನಿಂದ ಮೇಲಕ್ಕೆ ಎತ್ತಿದಂಥಾ ವರಾಹಮೂರ್ತಿಗೆ ಮಂಗಳವು ॥೧೦೧॥

ಹಿರಣ್ಯಪೀಡಿತಂ ಭಕ್ತಂ ಪ್ರಹ್ಲಾದಂ ರಕ್ಷಿತುಂ ತತಃ ।
ಸ್ತಂಭಾದುದ್ಭವತೇ ಸದ್ಯಃ ನರಸಿಂಹಾಯ ಮಂಗಲಮ್ ॥೧೦೨॥

ಹಿರಣ್ಯಕಶಿಪುವೆಂಬ ಅಸುರನಿಂದ ಪೀಡಿಸಲ್ಪಟ್ಟ ಪರಮಭಾಗವತನಾದ ಶ್ರೀಪ್ರಹ್ಲಾದನನ್ನು ಆ ಅಸುರನಿಂದ ಬಿಡಿಸಲು ಸ್ತಂಭದಿಂದಲೆ ಹುಟ್ಟದಂಥಾ, ನರಸಿಂಹಮೂರ್ತಿಗೆ ಮಂಗಳವು ॥೧೦೨॥

ಬಲಾದಪಹೃತಂ ರಾಜ್ಯಂ ಧಾತು ಮಿಂದ್ರಾಯ
ಯಾಚ್ಞಯಾ । ಬಲಿಂ ನಿಗೃಹ್ಣತೇ ಸಾಕ್ಷಾತ್
ಖರ್ವರೂಪಾಯ ಮಂಗಲಮ್ ॥ ॥೧೦೩॥

ಬಲಾತ್ಕಾರದಿಂದ ಅಪಹರಿಸಿಕೊಂಡಿದ್ದ ತ್ರೈಲೋಕ್ಯ ರಾಜ್ಯವನ್ನು ಇಂದ್ರನಿಗೆ ಕೊಡುವುದಕ್ಕಾಗಿ ಯಾಚನೆಯಿಂದ ಸಾಕ್ಷಾತ್ತಾಗಿ ಬಲಿಯನ್ನು ನಿಗ್ರಹಿಸಿದಂಥಾ, ವಾಮನಮೂರ್ತಿಗೆ ಮಂಗಳವು ॥೧೪॥

ದುರ್ವೃತ್ತಕ್ಷತ್ರದಮನಕ್ಲೇಶಿತಾಂ ರಕ್ಷಿತುಂ ಮಹೀಮ್ ।
ಹಸ್ತಾದೃತಕುಠಾರಾಯ ಭೃಗುರೂಪಾಯ ಮಂಗಲಮ್ ॥ ॥೧೪॥

ಬಹಳ ಗರ್ವಿತರಾದ ದುಷ್ಟ ಕ್ಷತ್ರಿಯರ ತೊಂದರೆಗಳಿಂದ ಕ್ಲೇಶಪಡಿಸಲ್ಪಟ್ಟ ಭೂದೇವಿಯನ್ನು ರಕ್ಷಿಸುವದಕ್ಕಾಗಿ ಕೈಯಲ್ಲಿ ಕೊಡಲಿಯನ್ನು ಹಿಡಿದ ಪರಶುರಾಮಮೂರ್ತಿಗೆ ಮಂಗಳವು ॥೧೪॥

ದೃಪ್ಯತ್ಪೌಲಸ್ತ್ಯವಿಪ್ಲುಷ್ಟ ಜಗತೀತಾಪಶಾಂತಯೇ ।
ಗೃಹೀತಚಂಡಧನುಷೇ ರಘುರೂಪಾಯ ಮಂಗಲಮ್ ॥ ॥೧೫॥

ಗರ್ವಿಷ್ಠನಾದ ರಾವಣನಿಂದ ಸುರಿಯಲ್ಪಟ್ಟ ಲೋಕದ ತಾಪವನ್ನು ನೀಗಲಾಡಿಸುವದಕ್ಕಾಗಿ ಕ್ರೂರವಾದ ಧನುಸ್ಸನ್ನು ಕೈಯಲ್ಲಿ ಹಿಡಿದ ಶ್ರೀ ರಾಮಮೂರ್ತಿಗೆ ಮಂಗಳವು ॥೧೫॥

ಅಜ್ಞಾನಮೂರ್ಛಾ ಸಂಮೂಢಚೇತಸಾ
ಮುದ್ಧಿಧೀರ್ಷಯಾ । ಗೀತಾಮೃತಂ ವಿತರತೇ
ಯದುರೂಪಾಯ ಮಂಗಲಮ್ ॥ ॥೧೬॥

ಅಜ್ಞಾನವೆಂಬ ಮೂರ್ಛೆಯಿಂದ ಮೂಢವಾದ ಮನಸ್ಸುಳ್ಳವರ ಉದ್ಧಾರಕ್ಕಾಗಿ ಗೀತೆ ಎಂಬ ಅಮೃತವನ್ನು ವರ್ಷಿಸುವ ಶ್ರೀ ಕೃಷ್ಣಮೂರ್ತಿಗೆ ಮಂಗಳವು ॥೧೬॥

ಯೋ ಯಾದವಾದ್ರಿಶಿಖರೇ ದಯಯಾತ್ತ
ವಿದ್ಯಾಂ ಸರ್ವಸ್ಯ ವರ್ಷತಿ ಗುರುಶ್ಶ್ರೀವಣಾಂತರೇಷು ।
ತತ್ಪಾದಪಂಕಜಮಕರಂದಮಧುವ್ರತೇನ
ನಾರಾಯಣೇನ ರಚಿತಾ ಸ್ತುತಿಮಂಜರೀಯಮ್ ॥ ॥೧೭॥

ಗು

ರುಗಳು ದಯೆಯಿಂದ ನನ್ನು

ವರ್ಷಿಸುತ್ತಿರುವರೋ, ಅವರ ಪಾದಕಮಲಗಳ ಮಕರಂದಕ್ಕೆ ಭ್ರಮರಪ್ರಾಯನಾದ ನಾರಾಯಣನಿಂದ ಈ ಸ್ತುತಿಮಂಜರಿ ಎಂಬುದು ರಚಿಸಲ್ಪಟ್ಟಿತು ॥೧೦೩॥

ಶೇಷಾಚಲೇ ಶ್ರೀನಿವಾಸಶ್ರುತ್ಯೋರ್ಭಕ್ತ್ಯಾ ನಿವೇದಿತಾಮ್ ।

ಹೃತ್ಕಂಠಕರ್ಣೇ ಧತ್ತಾರ್ಯಾಃಪ್ರೀತ್ಯೈಮಾಂ ಸ್ತುತಿಮಂಜರೀಮ್॥೧೦೪

ಎಲೈಆರ್ಯರೆ ! ಶ್ರೀಶೇಷಾಚಲದಲ್ಲಿ ದಯಮಾಡಿಸಿರುವ ಶ್ರೀನಿವಾಸರ ಕಿವಿಗಳಲ್ಲಿ ಭಕ್ತಿಯೊಡನೆ ಅರ್ಪಿಸಲ್ಪಟ್ಟ ಈ ಸ್ತುತಿಮಂಜರಿಯನ್ನು ನೀವೆಲ್ಲರೂ ಪ್ರೀತಿಯೊಡನೆ ಹೃದಯದಲ್ಲಿಯೂ ಕಂಠದಲ್ಲಿಯೂ ಕಿವಿಗಳಲ್ಲಿಯೂ ಧರಿಸುವವರಾಗಿರಿ ॥೧೦೪॥

ಶ್ರೀನಿವಾಸಾಯ ಮಂಗಲಮ್.

ಶ್ರೀಃ.

